ಡಾ. ಎಸ್. ಸಿ. ಪಾಟೀಲ

# ಆಚರಣೆಯಲ್ಲಿ ಜನಪದ ವಾಸ್ತು, ಶಿಲ್ಪಗಳು



# ಆಚರಣೆಯಲ್ಲಿ ಜನಪದ ವಾಸ್ತು, ಶಿಲ್ಪಗಳು

ಡಾ. ಎಸ್.ಸಿ. ಪಾಟೀಲ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

**ACHARANEYALLI JANAPADA VAASTU, SHILPAGALU** - By Dr. S. C. Patila, Published by The Director, Prasaranga, Kannada University, Hampi, Vidyaranya, Kamalapura - 583 221

First Impression : 1998, Pp ii+29, Rs. 3-00

ಮಂಟಪ ಮಾಲೆ ೩೩



ಪ್ರಕಾಶಕರು
ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಬೆಲೆ ರೂ. ೩.೦೦

ಮುದ್ರಣ
ಪರಿಮಳ ಮುದ್ರಣಾಲಯ
ಹನುಮಂತನಗರ
ಬೆಂಗಳೂರು ೫೬೦ ೦೧೯

# ಪರಿವಿಡಿ

# ಆಚರಣೆಯಲ್ಲಿ ಜನಪದ ವಾಸ್ತುಶಿಲ್ಪಗಳು

ಜಗತ್ತಿನ ಯಾವುದೇ ಸಂಸ್ಕೃತಿಯ ಮೂಲಸೆಲೆಯನ್ನು ಜಾನಪದ ಸಂಸ್ಕೃತಿಯಿಂದ ಗುರುತಿಸಲಾಗುತ್ತದೆ. ಈ ಅರ್ಥದಲ್ಲಿ ಜಾನಪದವು ಮಾನವ ಸಂಸ್ಕೃತಿಯ ಮೊದಲ ಪುಟವೆನ್ನಬಹುದು. ಅಗೋಚರ ಕಾಲವೊಂದರಲ್ಲಿ ರೂಪುಗೊಂಡಿರಬಹುದಾದ ಜನಪದ ಕಲೆಗಳು ಆಯಾ ಸಂಸ್ಕೃತಿಯ ಜನಬದುಕಿನ ಆತ್ಮವಾಗಿ, ಜೀವವಾಗಿ, ಜೀವಂತ ಅಸ್ತಿತ್ವವನ್ನು ಪಡೆದಿವೆಯಲ್ಲದೆ ಅವು ಜನಪದರ ಬದುಕಿನೊಡನೆ ಅರ್ಥಪೂರ್ಣ ಸಂಬಂಧವನ್ನು ಹೊಂದಿವೆ. ಅವರ ಆಚಾರ ವಿಚಾರ, ರೀತಿ ನೀತಿ, ನಂಬಿಕೆಗಳು, ವಿಧಿಕ್ರಿಯೆಯಾಗಿ, ಸಂಪ್ರದಾಯವಾಗಿ, ಆಚರಣೆಯಾಗಿ ಹಲವಾರು ಸ್ಥಿತ್ಯಂತರಗಳೊಂದಿಗೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ನಿಂತಿವೆ. ಜನಪದರ ಇಂತಹ ನೂರಾರು ಕಲೆಗಳಲ್ಲಿ ವಾಸ್ತುಶಿಲ್ಪಕಲೆಗಳು ಮಹತ್ವದವುಗಳಾಗಿವೆ.

ಶಾಸ್ತ್ರೋಕ್ತವಾದ ಪ್ರೌಢಕಲೆಗಳಿಂದ ಭಿನ್ನವಾದ ಜನಪದ ಕಲೆ, ತಲೆಮಾರಿನಿಂದ ತಲೆಮಾರಿಗೆ ಸ್ಮರಣಶಕ್ತಿಯ ಮಾಧ್ಯಮದಿಂದ ಉಳಿದುಬರುವ ಗುಣವನ್ನು ಹೊಂದಿದೆ. ಅಲ್ಲದೆ "ಜನಪದ ಕಲೆಯ ತೆಕ್ಕೆಯಿಂದಲೇ ಉನ್ನತ ಕಲೆಗಳು ಸಿಡಿದು ಸ್ವತಂತ್ರವಾಗಿ ಬೆಳೆದುಕೊಂಡು ಬಂದಿವೆ. ಅವು ನಗರಗಳಂತೆ, ಪಟ್ಟಣಗಳಂತೆ ಅಲ್ಲಿನ ಉದ್ಯಾನಗಳಂತೆ ಶೋಭಿಸಿದರೆ ಜನಪದ ಕಲೆಗಳು ಗಿರಿವನ ಶೋಭಿತೆಯಾದ ನಿಸರ್ಗದಂತೆ ಅನಂತ ವೈವಿಧ್ಯಗಳಲ್ಲಿ ಕಂಡುಬರುತ್ತವೆ. ಪ್ರೌಢಕಲೆಗಳು ಒಂದು ಕಡೆ ಬೆಳೆದುಕೊಂಡು ಹೋದಂತೆ ಜನಪದ ಕಲೆಗಳು ಜನಪದ ಸಂಸ್ಕೃತಿಯಲ್ಲಿ ಇನ್ನೊಂದು ಕಡೆ ನಿಚ್ಚಳವಾಗಿ ಉಳಿದುಕೊಂಡು ಬಂದಿವೆ"[೧] ಎನ್ನುವ ಡಾ. ಜೀ.ಶಂ. ಪರಮಶಿವಯ್ಯ ಅವರ ಮಾತುಗಳು ಹೆಚ್ಚು ಸೂಕ್ತವಾದ ವಿವರಣೆಯಾಗಿದೆಯೆಂದೇ ಹೇಳಬೇಕು. ಕಾಲ ಬದಲಾದಂತೆ ಮನುಷ್ಯನ ಕ್ರಿಯಾಶೀಲಮನಸ್ಸು ವಿಕಾಸವಾದಂತೆ ಜನಪದ ಕಲೆಗಳು ಸಂಕೀರ್ಣವಾಗುತ್ತ ಬಂದುವಲ್ಲದೆ ಪ್ರೌಢಕಲೆಗಳ ಹುಟ್ಟಿಗೆ ಕಾರಣವಾದವು. ಜನಪದ ಮತ್ತು ಶಿಷ್ಟಪದ ಕಲೆಗಳೆಂಬುದಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಬಹುದಾದ ಈ ಸಂದರ್ಭದಲ್ಲಿ ಪ್ರಸ್ತುತ ಜನಪದ ವಾಸ್ತು ಶಿಲ್ಪಕಲೆ ಮತ್ತು ಶಿಷ್ಟಪದ ವಾಸ್ತುಶಿಲ್ಪಕಲೆಯ ವೈಲಕ್ಷಣಗಳನ್ನು ಕುರಿತು ಇಲ್ಲಿ ಸ್ಥೂಲವಾಗಿ ನೋಡಬಹುದು.

ಶ್ರೀ ಅಜಿತಕುಮಾರ ಮುಖರ್ಜಿಯವರು ಹೇಳುವಂತೆ

"A Folk Art should be distingushied from a'Highway' art both of which however can grow at one and the same time. Folk Art is always tradational but all traditional art is not folk art"[೨]

(ಜನಪದಕಲೆ ಪ್ರೌಢಕಲೆಯಿಂದ ಭಿನ್ನವಾಗಿರುವುದರ ಜೊತೆಗೆ ಅವು ಒಂದಕ್ಕೊಂದು ಪೂರಕವಾಗಿ, ಸಮನಾಗಿ ಬೆಳೆಯುತ್ತವೆ ಮತ್ತು ಜನಪದಕಲೆಗಳು ಯಾವಾಗಲೂ ಪರಂಪರಾಗತವಾಗಿರುತ್ತವೆ. ಆದರೆ ಪರಂಪರಾಗತವಾದ ಎಲ್ಲಾ ಕಲೆಗಳು ಜನಪದ ಕಲೆಗಳಾಗಲಾರವು.)

---

೧. ಡಾ. ಜೀ.ಶಂ. ಪರಮಶಿವಯ್ಯ: ಜನಪದ ಕಲಾವಿಹಾರ, ಪು.೬

೨. ಅಜಿತ್‌ಕುಮಾರ್ ಮುಖರ್ಜಿ: ಫೋಕ್ ಆರ್ಟ್ ಆಫ್ ಬೆಂಗಾಲ್, ಪು.೧೪

ಬಂಗಾಳದ ಜನಪದ ಮತ್ತು ಶಿಷ್ಟಪದ ಕಲೆಗಳನ್ನು ಕುರಿತು ಹೇಳಿದ ಈ ಮಾತುಗಳು ಕರ್ನಾಟಕದ ಜನಪದ ವಾಸ್ತುಶಿಲ್ಪ ಹಾಗೂ ಶಿಷ್ಟಪದ ವಾಸ್ತುಶಿಲ್ಪಕಲೆಗಳಿಗೂ ಅನ್ವಯಿಸಬಹುದಾಗಿದೆ.

ನಗರವರ್ಗದವರ ಪ್ರಮಾಣ ಬದ್ಧ ಲಕ್ಷಣಯುಕ್ತ ವಾಸ್ತು ಶಿಲ್ಪಕಲೆಯೂ ಶಿಷ್ಟಪದ ವಾಸ್ತು ಶಿಲ್ಪಕಲೆಯೆನಿಸಿದರೆ, ಗ್ರಾಮೀಣರ ಲಕ್ಷಣಮುಕ್ತ ಅಥವಾ ತಮಗೆ ಅಂದ ಚೆಂದ ಕಂಡಂತೆ ರಚಿಸಿಕೊಂಡ, ವಿನ್ಯಾಸಗೊಳಿಸಿಕೊಂಡ ಕಲೆ ಜನಪದ ವಾಸ್ತು ಶಿಲ್ಪಕಲೆಯಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರು "ಜನಪದ, ಶಿಷ್ಟಪದ ಶಬ್ದಗಳಿಗೆ ಪ್ರಾಚೀನರು ಬಳಸಿದ ಸಂವಾದಿಗಳೆಂದರೆ 'ದೇಶಿಮಾರ್ಗ' ದೇಶಿಗೆ ದೇಶ ಸಂಬಂಧಿ ಎಂಬುದು ವಾಚ್ಯಾರ್ಥ, ಲಕ್ಷಣ ಮುಕ್ತವಾದ ರಚನೆ ಎಂಬುದು ವಿಶೇಷಾರ್ಥ"[೩] ಎಂದು ಹೇಳುತ್ತಾರೆ. ಪ್ರಾಕೃತ ಸಹಜವಾದುದು 'ದೇಶಿ'ಯಾಗಿ ಈ ಪ್ರಕೃತ ಪರಿಷ್ಕೃತವಾಗಿ 'ಮಾರ್ಗ'ವಾಯಿತು. ಅಂದರೆ ಇಲ್ಲಿ ದೇಶಿ- (ಜನಪದ) 'ಮಾರ್ಗ' ಶಿಷ್ಟಪದ ಎಂಬರ್ಥದ ವಿಶ್ಲೇಷಣೆಯನ್ನು ವಾಸ್ತುಶಿಲ್ಪಕಲೆಗಳಿಗೂ ಅನ್ವಯಿಸಬಹುದಾಗಿದೆ.

ದೇಶಿ, ದೇಶಿಗ ಎಂಬ ಮಾತುಗಳು ಗ್ರಾಮೀಣ ಮನುಷ್ಯನನ್ನು ಕುರಿತು ಬಳಸಿದ ಮಾತುಗಳಾಗಿವೆ. ಅಂಥ ವಾಸ್ತು ಶಿಲ್ಪಗಳನ್ನು ದೇಶಿ ವಾಸ್ತುಶಿಲ್ಪಗಳೆಂದು ಕರೆಯಬಹುದು. 'ಮಾರ್ಗ' ಎಂಬುದನ್ನು ಪಥವಾಗಿ, ಪ್ರಮಾಣಬದ್ಧವಾಗಿ, ಲಕ್ಷಣಯುಕ್ತವಾಗಿ ಕಾಣುವುದರಿಂದ ಶಿಷ್ಟ ಸಂಸ್ಕೃತಿಯ ನಗರ ನಾಗರಿಕರು ರಚಿಸಿದ ವಾಸ್ತುಶಿಲ್ಪವನ್ನು ಇಲ್ಲಿ 'ಮಾರ್ಗ' ವಾಸ್ತುಶಿಲ್ಪಕಲೆಯೆಂದು ಕರೆಯಬೇಕಾಗುತ್ತದೆ. 'ಜನಪದ' ಶಬ್ದವು ಸಾಮಾನ್ಯ ಜನತೆಯೆಂದೂ, ಶಿಷ್ಟಪದ ಶಬ್ದವು ಜನಸಾಮಾನ್ಯರನ್ನು ಹೊರತುಪಡಿಸಿದ ನಾಗರಿಕ ಆಚಾರ ವಿಚಾರಗಳ ಪ್ರಬುದ್ಧ ಜನತೆಯನ್ನು ಸೂಚಿಸುತ್ತದೆ. ಸಾಹಿತ್ಯ ಮತ್ತು ಕಲೆಯ ವಿಷಯಕ್ಕೆ ಸಾಮಾನ್ಯರಿರಲಿ, ಪ್ರಬುದ್ಧನಾಗರೀಕರಿರಲಿ ಸಾಂಪ್ರದಾಯಿಕವಾಗಿ ಕೆಲವು ಸಲ ಈ ಜನರ ಆಚಾರ ವಿಚಾರ, ಜೀವನ ರೀತಿ, ಅಭಿರುಚಿ ಒಂದೇ ಆಗಿರುವುದು ಕಂಡುಬರುತ್ತದೆ. ಹಾಗಾದಾಗ ಶಿಷ್ಟ ಸಂಸ್ಕೃತಿ ಮತ್ತು ಜನಪದ ಸಂಸ್ಕೃತಿ - ಒಳಗೊಳಗೇ ಅಭಿನ್ನವೆಂಬುದನ್ನು ಇದು ಸೂಚಿಸುತ್ತದೆ." ವಾಸ್ತು, ಪೂಜೆ, ಗೃಹಶಾಂತಿ, ನೆದರಾಗದಿರಲೆಂದು ಹೊಸಮನೆಗಳ ಮುಂದೆ ಕಟ್ಟುವ ಬೆದರುಗಳು, ದೇವಾಯಲದ ವಾಸ್ತು ಶಿಲ್ಪಕ್ಕೆ ನೆದರಾಗದಿರಲೆಂದು ಬೇತಾಳದ ಶಿಲ್ಪಗಳು, ದೇವಾಲಯದ ಮುಂದೆ ಗೋಪುರಗಳಲ್ಲಿ ರಚಿಸಿರುವ ಮಿಥುನ ಶಿಲ್ಪಗಳಂತಹ ಹಲವಾರು ಉದಾಹರಣೆಗಳು ಜನಪದ ಹಾಗೂ ಶಿಷ್ಟಪದ ಸಂಸ್ಕೃತಿಯ ವಾಸ್ತು ಶಿಲ್ಪಗಳೆರಡರಲ್ಲಿಯೂ ಕಾಣಬಹುದಾಗಿದೆ.

ಇಂತಹ ಕೆಲವು ಸಾಮ್ಯತೆಗಳನ್ನು ಬಿಟ್ಟರೆ ಹಲವಾರು ವೈಲಕ್ಷಣಗಳು ಇಲ್ಲಿ ಕಂಡುಬರುತ್ತವೆ. ಶಿಷ್ಟಪದ ವಾಸ್ತುಶಿಲ್ಪಗಳಲ್ಲಿ ಕಂಡುಬರುವ ವ್ಯಾಕರಣಾಂಶಗಳು ಕೃತಕತೆ ಸೂಕ್ಷ್ಮತೆ ಜನಪದ ವಾಸ್ತು ಶಿಲ್ಪಗಳಲ್ಲಿ ಕಾಣಸಿಗದು. ಏನಿದ್ದರೂ, ಸಹಜತೆ, ಮುಗ್ಧತೆಗಳೇ ಅಲ್ಲಿ ವಿಶೇಷವೆನಿಸಿವೆ. ಶಿಷ್ಟಪದ ವಾಸ್ತುಶಿಲ್ಪದ ಮೂಲಕ್ಕೆ ಹೋದಂತೆ ಅದು ಜನಪದೀಯ ಮೂಲವೆಂಬ ಅಂಶ ಸ್ಪಷ್ಟವಾಗುತ್ತದೆ. ವಸ್ತುವೊಂದು ಸಿದ್ಧರೂಪಗೊಳ್ಳುವಾಗ ಕಚ್ಚಾಸಾಮಗ್ರಿಯಾಗಿ ಇರುವಂತೆ ಇಂದಿನ ಶಿಷ್ಟರೂಪಕ್ಕೆ

೩. ಡಾ. ಎಂ.ಎಂ. ಕಲಬುರ್ಗಿ: (ಲೇ), ಮಾರ್ಗ ಸಾಹಿತ್ಯ ಮತ್ತು ಜನಪದ ಸಾಹಿತ್ಯ, "ಕರ್ನಾಟಕ ಜನಪದ", ಪು.೧

ಮೊದಲು ಕಚ್ಚಾರೂಪವೊಂದು ಇದ್ದು ಕಾಲಕ್ರಮೇಣ ಅದು ಶಿಷ್ಟದ ಶಿಸ್ತಿಗೆ ಒಳಪಟ್ಟಿರುವುದು ತಿಳಿದುಬರುವ ಸಂಗತಿಯಾಗಿದೆ. ಈ ಕಚ್ಚಾರೂಪವೆನ್ನುವುದು ಜನಪದರಲ್ಲಿ ಹೊಳೆಯ ತೊಡಗಿದ್ದುದು ಬದುಕಿನ ವಿವಿಧ ಚಟುವಟಿಕೆಯ ಅಂಗವಾಗಿಯೇ ಎಂಬುದು ಗಮನಿಸಬೇಕಾದ ಅಂಶ. ಆ ಅರ್ಥದಲ್ಲಿ ಬದುಕಿನ ಎಲ್ಲ ರಂಗಗಳ ವಿವಿದಾಂಗಗಳೇ ಜನಪದ ವಾಸ್ತು, ಶಿಲ್ಪಕಲೆಯ ಮುಖ್ಯಲಕ್ಷಣಗಳು. ಸಂಪ್ರದಾಯ ನಂಬಿಕೆಗಳು ಧರ್ಮದ ಆರಚಣೆಯ ಹಿನ್ನೆಲೆಯಲ್ಲಿ ಜನಪದರಲ್ಲಿ ಮೂರ್ತರೂಪಕ್ಕೆ ತಿರುಗಿದ್ದುದೇ ಜನಪದ ವಾಸ್ತುಶಿಲ್ಪಕಲೆ. ಶಾಸ್ತ್ರೋಕ್ತ ಕಲಿಕೆಗೆ ಒಳಪಟ್ಟ ಶಿಷ್ಟಪದ ವಾಸ್ತುಶಿಲ್ಪಕಲೆಯೇ ಬೇರೆ. ಕಲೆಗಾಗಿ ಕಲೆ, ಆನಂದಕ್ಕಾಗಿ ಕಲೆ, ಪ್ರವೃತ್ತಿಗಾಗಿ ಕಲೆ ಎಂದು ಶಿಷ್ಟಪದ ವಾಸ್ತುಶಿಲ್ಪಕಲೆಯಲ್ಲಿ ಪರಿಭಾವಿಸಿದರೆ, ಬದುಕಿಗಾಗಿ ಪಟ್ಟ ಪಾಡೇ ಕಲೆ, ವೃತ್ತಿ ಮತ್ತು ಪ್ರವೃತ್ತಿಗಾಗಿ ಕಲೆಯೆಂದು ಜನಪದ ವಾಸ್ತುಶಿಲ್ಪಕಲೆಯಲ್ಲಿ ಪರಿಭಾವಿಸಬೇಕು. ಈಗಿನ ಲಲಿತಕಲೆ ಮತ್ತು ಕುಶಲಕಲೆಗಳ ಮೂಲ ಸೆಲೆಯೂ ಸಹ ಜನಪದವೇ, ಮಳಲ ಮೇಲಿನ ಹೆಜ್ಜೆಯಂತೆ ತೋರುವ ಇವುಗಳ ಮೂಲರೂಪ ಜನಪದದಲ್ಲಿವೆ. ಶಿಷ್ಟಪದ ವಾಸ್ತುಶಿಲ್ಪಕಲೆ ಜನ ಸಾಮಾನ್ಯರ ಪ್ರತಿನಿಧಿಗಳಿಂದ ವಿಕಾಸಗೊಂಡಂತಿದೆ. ಪ್ರಕೃತಿ ಮತ್ತು ನಿತ್ಯದ ಬದುಕು ಜನಪದಕಲೆಗೆ ಆಶ್ರಯ ನೀಡಿದರೆ ಜನಪದಕಲೆಯಿಂದ ಶಿಷ್ಟಪದಕಲೆ ಬೌದ್ಧಿಕ ವಿಕಾಸ ಪಡೆದು ಬೆಳೆಯಿತೆನ್ನಬಹುದು. ಜನಪದ ವಾಸ್ತುಶಿಲ್ಪಕಲೆಯ ಲಕ್ಷಣವೆಂದರೆ ಒಂದು ರೀತಿಯಲ್ಲಿ ಬದುಕಿನ ಲಕ್ಷಣ ಪ್ರಕೃತಿಯ ಲಕ್ಷಣವೆಂದೇ ಅರ್ಥ.

ಜನಪದ ವಾಸ್ತುಶಿಲ್ಪಕಲೆಯ ಕಲಾತ್ಮಕ ಮತ್ತು ಪ್ರಯೋಜನಾತ್ಮಕ ಹಿನ್ನೆಲೆಯಲ್ಲಿ ಹೆಚ್ಚು ಪ್ರಸ್ತುತವಾಗುತ್ತದೆ. ಶಿಷ್ಟವಾಸ್ತುಶಿಲ್ಪಕಲೆಗೆ ಈ ಎರಡೂ ಏಕಕಾಲಕ್ಕೆ ಅನ್ವಯವಾಗುವುದಿಲ್ಲ. ಜನಪದ ವಾಸ್ತುಶಿಲ್ಪಕಲೆ ಶಿಷ್ಟಪದದಿಂದ ತುಂಬ ವ್ಯತ್ಯಸ್ತವಾಗುತ್ತದೆ. ಸಾಮಾಜಿಕ ಜೀವನದ ಒಳರಕ್ತಮಾಂಸಗಳನ್ನು ಅಮೂರ್ತ ಕಲ್ಪನೆಯ ಮೂಲಕ ಚಲನಶೀಲವಾಗುವಂತೆ ಮಾಡುವ ಸಾಮರ್ಥ್ಯ ಜನಪದ ವಾಸ್ತುಶಿಲ್ಪಕಲೆಗೆ ಇದೆ. ಇವು ಸರಳ ಚೌಕಟ್ಟಿನೊಂದಿಗೆ ಮನಸ್ಸಿನ ಸ್ವಾತಂತ್ರ್ಯದೊಂದಿಗೆ ಕೆಲವು ಸಲ ಸಮೂಹವಾಗಿಯೇ ನಿತ್ಯ ಬಳಕೆಯಲ್ಲಿ ಬಂದುದುಂಟು. ಧಾರವಾಡ, ಬೆಳಗಾಂವ ಭಾಗದಲ್ಲಿ ಇಂದಿಗೂ ಪ್ರಚಲಿತವಿರುವ 'ಅಲ್ಲಿಕೇರಿಯ' ಆಚರಣೆಯಲ್ಲಿ ಹೆಣ್ಣುಮಕ್ಕಳು ಮಾಡುವ ಕೋಟೆಗೋಡೆಯ ವಾಸ್ತುವಿನ್ಯಾಸ, ಬಸವಣ್ಣನ ಶಿಲ್ಪದ ನಿರ್ಮಾಣ, ಜೋಕುಮಾರನ ಆಚರಣೆಯಲ್ಲಿ ಮಣ್ಣಿನಿಂದ ಮಾಡುವ ಜೋಕುಮಾರನ ಶಿಲ್ಪ, ಮಣ್ಣೆತ್ತಿನ ಅಮವಾಸಿಯಲ್ಲಿ ಮಾಡುವ ಮಣ್ಣಿನ ಬಸವಣ್ಣಗಳು, ದೀಪಾವಳಿಯ ಹಬ್ಬದಲ್ಲಿ ಸೆಗಣಿಯಿಂದ ಮಾಡುವ ಪಾಂಡವ ಕೌರವರ ಶಿಲ್ಪ ಹಾಗೆಯೇ ಭಾವಿ ಮತ್ತು ಕೋಟೆಗೋಡೆಯ ವಿನ್ಯಾಸ, ಬೀಸುವ, ಕುಟ್ಟುವ ಮೂರ್ತಿಶಿಲ್ಪ ವಿನ್ಯಾಸ, ಮಳೆ ಬರುವುದರ ಸಲುವಾಗಿ ಪ್ರಾರ್ಥಿಸುವ ಗುರ್ಜಿ, ಗುಳ್ಳವ್ವನ ಮಣ್ಣಿನ ಮೂರ್ತಿಗಳು ಕಟ್ಟಿಗೆಯ ಮೂರ್ತಿಗಳು, ಇದೇ ಸಂದರ್ಭದಲ್ಲಿ ಮಾಡುವ ಸಕ್ಕರೆಯ ಮೂರ್ತಿವಿನ್ಯಾಸಗಳು, ತೇರು, ಗುಡಿ, ಒಂಟೆ, ಆರತಿ, ಸಕ್ಕ ಸರಗಿ, ಕೋಳಿ, ನವಿಲು, ಗುಬ್ಬಿ, ಬಾತುಕೋಳಿ, ಬೀಸುವಕಲ್ಲು, ಗಣೇಶನ ಹಬ್ಬದ ಗಣಪತಿ ಮುಂತಾದವು ಜನಪದರ ವ್ಯಕ್ತಿ ಸೃಷ್ಟಿಯಾಗಿ ಸಮಷ್ಟಿಯ ಗುಂಪಾಗಿ ಪ್ರವರ್ತಿಸುತ್ತವೆ. ಅಂದರೆ ಇಲ್ಲಿ ವಾಸ್ತುಶಿಲ್ಪಕಲೆ ಆಚರಣೆಯಾಗಿ, ಸಂಪ್ರದಾಯವಾಗಿ ಅರ್ಥಪಡೆದು ನಿಲ್ಲುತ್ತದೆ. ಶಿಷ್ಟಪದ ಶಿಲ್ಪಕಲೆಗೆ ಇಂಥ ಸಮೂಹ ಸಾನಿಧ್ಯವಾಗಲಿ ಗುಂಪು ಮಹತ್ವವಾಗಲಿ ಇರದು.

ಶಿಷ್ಟಪದ ವಾಸ್ತುಶಿಲ್ಪಕಲೆ ಬಿಡುವಿನ ವೇಳೆಯಲ್ಲಿ ಹುಟ್ಟಿದರೆ ಜನಪದ ವಾಸ್ತುಶಿಲ್ಪಕಲೆ ದುಡಿಯುವ ಸಮಯದಲ್ಲಿ ಸೃಷಿಯಾಗಿದೆ. ಒಂದು ವ್ಯಷ್ಟಿಯ ಸೃಷ್ಟಿಯೆನಿಸಿದರೆ, ಇನ್ನೊಂದು ಸಮಷ್ಟಿಯ ಸೃಷ್ಟಿಯಾಗಿದೆ. ಶಿಷ್ಟಪದ ವಾಸ್ತುಶಿಲ್ಪಕಲೆ, ಕಲ್ಲು, ಕಟ್ಟಿಗೆ ಲೋಹದ ಕೆತ್ತನೆ, ಮೂರ್ತಿಶಿಲ್ಪ ಮುಂತಾದವುಗಳಲ್ಲಿ ಶಾಶ್ವತ ರೂಪದಲ್ಲಿ ಉಳಿದು ಬಂದರೆ, ಜನಪದರಲ್ಲಿ ಅದು ಅನುಭವಕ್ಕೆ ಸೀಮಿತವಾಗಿ ಅಶಾಶ್ವತವಾಗಿ ಬೆಳೆದು ಬಂದಿದೆ. ಶಿಷ್ಟಪದ ವಾಸ್ತುಶಿಲ್ಪಕಲೆಯ ಹಿಂದೆ ಒಬ್ಬ ರಾಜನೋ, ಧರ್ಮವೋ, ಇದ್ದರೆ, ಜನಪದ ವಾಸ್ತುಶಿಲ್ಪಕಲೆಯಲ್ಲಿ ಜನಪದರ ದಟ್ಟವಾದ ಬದುಕು ಇರುವುದನ್ನು ಕಾಣಬಹುದು. ಶಿಷ್ಟಪದ ವಾಸ್ತುಶಿಲ್ಪಕಲೆಯಲ್ಲಿ ಬೆರಳೆಣಿಕೆಯಷ್ಟು ಮಹಿಳೆಯರಿದ್ದರೆ, ಜನಪದ ವಾಸ್ತುಶಿಲ್ಪಕಲೆಯಲ್ಲಿ ಮಹಿಳೆಯರದೇ ಸಿಂಹಪಾಲು, ಜನಪದ ವಾಸ್ತು, ಶಿಲ್ಪಕಲೆ ಸಂಪ್ರದಾಯನಿಷ್ಠವಾಗಿ ಸರಳರೂಪದಲ್ಲಿದ್ದರೆ, ಶಿಷ್ಟಪದ ವಾಸ್ತು ಶಿಲ್ಪಕಲೆಯೂ ಸಂಕೀರ್ಣನಿಷ್ಠವಾಗಿ ಕ್ಲಿಷ್ಟತೆಯನ್ನು ಹೊಂದಿರುತ್ತದೆ.

ಜನಪದರ ತೆರೆದ ಬದುಕಿನಂತೆಯೇ ಅವರ ವಾಸ್ತುಶಿಲ್ಪಕಲೆಯೂ ಕೂಡ. ದುರಗಮುರಗಿ ಗುಡಿಯ ವಿನ್ಯಾಸ, ಮೂರ್ತಿಶಿಲ್ಪ ಹಾಗೆಯೇ ಜೋಕುಮಾರನ ಮೂರ್ತಿಶಿಲ್ಪದಲ್ಲಿ ಅವನ ಗುಪ್ತಾಂಗವನ್ನು ಪ್ರಮುಖವಾಗಿ ಕಾಣುವಂತೆ ವಿನ್ಯಾಸಗೊಳಿಸಿರುವುದನ್ನು ನೋಡಿದಾಗ, ಬದುಕಿನ ಹುಟ್ಟು, ಸಾವು, ಬೆತ್ತಲೆಯಲ್ಲಿ ಪ್ರಕಟವಾಗುವ ಅಂಶವೇ ಇಲ್ಲಿ ಗೋಚರಿಸಿದಂತಿದೆ. ಆದರೆ ಶಿಷ್ಟಪದ ಮೂರ್ತಿಶಿಲ್ಪದಲ್ಲಿ ಹೆಚ್ಚಾಗಿ ಲೈಂಗಿಕಾಂಶಗಳು ಬಹಳ ಮಡಿವಂತಿಕೆಯಿಂದ ಅಭಿವ್ಯಕ್ತಗೊಳ್ಳುತ್ತವೆ.

ಜನಪದರ ವಾಸ್ತುಶಿಲ್ಪದಲ್ಲಿ ದೈನಂದಿನ ಬದುಕಿನ ವಿವರಗಳು ಮೂಲ ವಿಷಯಗಳಾಗಿದ್ದರೆ, ಶಿಷ್ಟಪದರಲ್ಲಿ ಪ್ರಧಾನವಾಗಿ ಬದುಕಿನ ಆಯ್ದ ಮುಖಗಳ ಅಭಿವ್ಯಕ್ತಿ ಇರುತ್ತದೆ. ಜನಪದರಲ್ಲಿ ನೈಸರ್ಗಿಕ ವಸ್ತುಗಳ ಬಳಕೆ ವಿಶೇಷವಾಗಿದ್ದರೆ, ಶಿಷ್ಟಪದರಲ್ಲಿ ಕೃತಕ ಯಂತ್ರೋಪಕರಣಗಳಿಂದಾದ ವಸ್ತುಗಳ ಬಳಕೆ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ. ಹೀಗೆ ಭಿನ್ನತೆಯಿದ್ದರೂ ಕೂಡ ಈ ಎರಡರಲ್ಲಿಯೂ ಮೇಲೆ ಹೇಳಿದಂತೆ ಒಂದಕ್ಕೊಂದು ಪೂರಕ ಹಾಗೂ ಪ್ರೇರಕವಾದ ಸಂಬಂಧವಿರುವುದನ್ನು ಅಲ್ಲಗೆಳೆಯುವಂತಿಲ್ಲ.

ಮನಸ್ಸಿನ ವಿಕಾಸವೇ ಮನುಷ್ಯ ಬದುಕಿನ ವಿಕಾಸ. ಹೊಟ್ಟೆ, ಬಟ್ಟೆ, ವಸತಿ ಇವುಗಳ ನಿರಂತರ ಹೋರಾಟವೆ ಜೀವನ. ಇಂತಹ ಜೀವನವನ್ನು ಬದುಕುವದರೊಡನೆ ಮನುಷ್ಯ ಅದು ಸಹ್ಯವಾಗುವಂತೆ ಕಲಾತ್ಮಕ ಅಂಶಗಳನ್ನು ಅದರೊಡನೆ ಸಂಯೋಜಿಸಿಕೊಂಡು ಬಂದಿರುವುದು ಕುತೂಹಲದ ಸಂಗತಿಯಾಗಿದೆ.

ಮನುಷ್ಯನಿಗೆ ಸೌಂದರ್ಯದೆಡೆಗೆ ಒಂದು ನೈಸರ್ಗಿಕವಾದ ಆಕರ್ಷಣೆಯಿದೆ. ಪ್ರತಿದಿವಸದ ಕೆಲಸಗಳಲ್ಲಿ ಸ್ವಲ್ಪ ಬಿಡುವು ಸಿಕ್ಕಾಗ ಅವನ ಲಕ್ಷ್ಯವು ಸೃಷ್ಟಿ ಸೌಂದರ್ಯದ ಕಡೆಗೆ ಹೋಗುತ್ತದೆ. ಆಗ ಅವನ ಮನಸ್ಸಿನಲ್ಲಿ ಒಂದು ಈರ್ಷೆ ಉಂಟಾಗುತ್ತದೆ. ಇಂಥ ಕಾಲಕ್ಕೆ ಸುಂದರವಾದ ವಸ್ತುವನ್ನು ಸೃಷ್ಟಿಸುವುದು ಮತ್ತು ಸೌಂದರ್ಯಾನುಭವವನ್ನು ಪಡೆಯುವುದು ಆತನಿಗೆ ಬೇಕು ಎನ್ನಿಸುತ್ತದೆ, ಪ್ರಿಯವೆನಿಸುತ್ತದೆ. ತಾನೇ ಸೃಷ್ಟಿಸಿದ ಸುಂದರವಾದ ವಸ್ತುವಿನೊಂದಿಗೆ ಅವನು ತನ್ಮಯನಾಗಲು ಪ್ರಯತ್ನಿಸುತ್ತಾನೆ. ಈ ಪ್ರಯತ್ನದೊಳಗಿನಿಂದ ಅನೇಕ ಕಲೆಗಳು ಉಗಮವಾಗಿವೆ.[೪] ಈ ಮಾತುಗಳು

೪. ಸರೋಜಿನಿ ಬಾಬರ (ಅನು), ಡಾ. ವಾಮನಬೇಂದ್ರೆ: ಮಹಾರಾಷ್ಟ್ರದ ಜನಪದ ಸಾಹಿತ್ಯ, ಪು.೧೦೨

ಜನಪದ ಮತ್ತು ಶಿಷ್ಟಪದ ಕಲೆಗಳೆರಡಕ್ಕೂ ಅನ್ವಯಿಸುತ್ತವೆ.

ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಆಚರಣೆಯಲ್ಲಿರುವ ಅಲ್ಲೀಕೋಟೆ (ಅಲ್ಲೀಕೇರಿ) ಅರಳೆಲೆ ಬಸವ, ಮಣ್ಣೆತ್ತು, ಗುಳ್ಳವ್ವ, ಹುತ್ತಪ್ಪ, ಚಂಗಳೆ ಶಿರಿಯಾಳ, ಗಣೇಶ, ಜೋಕುಮಾರ, ಗುರ್ಚಿ, ಶೀಗಿ, ಗೌರಿ, ಹಟ್ಟಿಹಬ್ಬದ ಪಾಂಡವರು, ಹೋಳಿ ಹಬ್ಬದ ಕಾಮಣ್ಣ, ಬೂದುಗ ಮುಂತಾದ ವಾಸ್ತು, ಮೂರ್ತಿಶಿಲ್ಪದ ಆಚರಣೆಯ ವಿಧಿವಿಧಾನಗಳನ್ನು ಕುರಿತು ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ.

## ೧. ಅಲ್ಲೀಕೋಟೆ (ಅಲ್ಲೀಕೇರಿ) ವಾಸ್ತುಶಿಲ್ಪಗಳ ಆಚರಣೆ

ಅಲ್ಲೀಕೋಟೆ, ಅಲ್ಲೀಕೇರಿಯೆಂಬ ಹೆಸರಿನ ವಾಸ್ತುಮೂರ್ತಿಶಿಲ್ಪದ ಆಚರಣೆಯ ಆಟವು ದೀಪಾವಳಿಯ ಹಬ್ಬದಲ್ಲಿ ಪ್ರಮುಖವಾಗಿ ಕಂಡು ಬರುತ್ತದೆ. ಬಾಲಕಿಯರೇ ಆಡುವ ಈ ರಸಪೂರ್ಣವಾದ ಆಟದ ಆಚರಣೆಯಲ್ಲಿ ಕೋಟೆ, ಊರು, ಕುಟುಂಬ, ದೈನಂದಿನ ಬದುಕಿನ ಚಟುವಟಿಕೆಗಳು ಅಲ್ಲದೆ ವಿವಿಧ ರೀತಿಯ ತಿಂಡಿ ತಿನಿಸುಗಾರಿಕೆ, ಕೋಲಾಟ, ಕುಣಿತ, ವಿನೋದ ಹಾಸ್ಯ ಮುಂತಾದ ವೈವಿಧ್ಯತೆಯೂ ಕಂಡುಬರುತ್ತದೆ.

ದೀಪಾವಳಿಯ ಪ್ರತಿಪದೆಯೆಂದು ಎತ್ತುಗಳನ್ನು ಅಲಂಕರಿಸಿ ಮೆರವಣಿಗೆ ತೆಗೆಯುವಂತೆಯೇ ಹುಡುಗಿಯರು ಆಡುವ ಬಸವಣ್ಣನ ಪೂಜೆಯ ಈ ಆಟವನ್ನೇ ಅಲ್ಲೀಕೇರಿ, ಅಲ್ಲೀಕೋಟೆ ಎಂದು ಕರೆಯುತ್ತಾರೆ. ಸಾಮೂಹಿಕವಾಗಿ ಒಂದೊಂದು ಓಣಿಯ ಅಥವಾ ಕೇರಿಯ ಹುಡುಗಿಯರು ಒಂದು ಕಡೆಗೆ ತಮ್ಮ ತಮ್ಮ ಕೇರಿಗಳಲ್ಲಿ ಕೋಟೆಯ ನಿರ್ಮಾಣ ಮಾಡಿ ಬಸವನ ಪೂಜಿಸುವ ವಾಸ್ತು, ಮೂರ್ತಿಶಿಲ್ಪದ ಸಂಪ್ರದಾಯ ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಕಂಡುಬರುವ ಆಚರಣೆಯಾಗಿದೆ.

ರಾಜ ಮಹಾರಾಜರುಗಳ ಕಾಲದಲ್ಲಿ ಸಾಮಾನ್ಯವಾಗಿ ಊರುಗಳಿಗೆ ರಕ್ಷಣೆಯಾಗಿ ಅನೇಕ ಸುತ್ತುಗಳ ಕೋಟೆಗೋಡೆಗಳು ಊರಲ್ಲಿ ಎತ್ತರವಾದ ಒಂದು 'ಹುಡೆ' ಅಲ್ಲಿ ಮಧ್ಯವರ್ತಿಸ್ಥಳದಲ್ಲಿ ಬಸವಣ್ಣನ ದೇವಸ್ಥಾನಗಳಿರುತ್ತಿದ್ದವು. ರೈತಾಪಿ ಜನ ವಿಶೇಷವಾಗಿ ಬಸವಣ್ಣನನ್ನು ಪೂಜಿಸುವುದು ವಾಡಿಕೆ. ಆ ಹಿನ್ನೆಲೆಯನ್ನು ನೆನಪಿಸುವ ರೀತಿಯಲ್ಲಿ ಈ ಸಂಪ್ರದಾಯ ಅತ್ಯಂತ ಸಂಭ್ರಮ ಸಡಗರದಿಂದ ಆಚರಿಸಲ್ಪಡುತ್ತದೆ.

### ೧.೧. ಅಲ್ಲೀಕೋಟೆಯ (ಅಲ್ಲೀಕೇರಿಯ) ವಾಸ್ತುಶಿಲ್ಪ ಆಚರಣೆಯ ಸಿದ್ಧತೆ

ದಸರೆಯ ಹಬ್ಬವು ಮುಗಿದು ಏಕಾದಶಿಯೆಂದು ಸಾಮಾನ್ಯವಾಗಿ ಒಂದು ವಯೋಗುಂಪಿನ ಬಾಲಕಿಯರೆಲ್ಲ ಗುಂಪು ಗುಂಪಾಗಿ ಒಬ್ಬೊಬ್ಬರ ಮನೆಯಲ್ಲಿ ಸೇರಿ ಅಲ್ಲೀಕೋಟೆಯ ಆಟದ ರೂಪರೇಷೆಗಳ ಕುರಿತು ಸಭೆ ಮಾಡುತ್ತಾರೆ. ಎಲ್ಲಿ ಯಾರ ಮನೆ ಅಥವಾ ಓಣಿಯಲ್ಲಿ ಯಾವ ಸ್ಥಳದಲ್ಲಿ ಅಲ್ಲೀಕೋಟೆಯನ್ನು ಮಾಡುವುದೆಂದು ನಿರ್ಣಯಿಸುತ್ತಾರೆ. ಪ್ರತಿಯೊಂದು ಓಣಿಯವರು ತಮ್ಮ ತಮ್ಮಲ್ಲಿ ಸ್ಪರ್ಧಾತ್ಮಕವಾಗಿ ಅಲ್ಲೀಕೋಟೆಯನ್ನು ನಿರ್ಮಾಣಮಾಡುತ್ತಾರೆ. ಹಬ್ಬ ಇನ್ನೂ ಒಂದು ವಾರವಿದೆಯೆನ್ನುವಾಗಲೇ ಕುಂಬಾರ ಮನೆಯಿಂದ ಮಣ್ಣಿನ ಹರಿವಾಣಗಳನ್ನು ತಂದು ಅವುಗಳಲ್ಲಿ ಭತ್ತ, ಜವಿಗೋಧಿ, ನವಣೆಗಳನ್ನು ಹಾಕಿ ಮೊಳಕೆ ಮಾಡುವ ಕಾರ್ಯ ನಡೆಯುತ್ತದೆ. ಆ ಹರಿವಾಣದಲ್ಲಿ

ಮಣ್ಣು ಗೊಬ್ಬರ ಹಾಕಿ ದಿನಾಲು ನೀರು ಹಾಕುತ್ತ ಸಸಿಗಳನ್ನು ತುಂಬ ಚೆನ್ನಾಗಿ ಸ್ಪರ್ಧಾತ್ಮಕವಾಗಿ ಬೆಳೆಯಿಸುತ್ತಾರೆ. ದೀಪಾವಳಿಯ ಗುರುದ್ವಾದಶಿಯ ದಿನಕ್ಕೆಂದರೆ ಬೀಜಗಳು ಮೊಳೆತು ಒಂದೊಂದು ಗೇಣುದ್ದದಷ್ಟು ಬೆಳೆದು ಸುಂದರವಾಗಿ ಕಾಣಿಸುತ್ತವೆ.. ಈ ದ್ವಾದಶಿಯ ದಿವಸಕ್ಕೆ ಅಲ್ಲೀಕೋಟೆಯ ಸಿದ್ಧತೆಗಳು ಮುಗಿದು ಮರುದಿವಸ 'ಆಟ' ಪ್ರಾರಂಭವಾಗುತ್ತದೆ.

## ೧.೨. ಅಲ್ಲೀಕೋಟೆಯ ವಾಸ್ತುವಿನ್ಯಾಸ ಬಸವಣ್ಣನ ಮೂರ್ತಿಶಿಲ್ಪದ ರಚನೆ

ಅಲ್ಲೀಕೇರಿಯ ಈ ಕೋಟೆ ನಿರ್ಮಾಣಕ್ಕಾಗಿ ಮೊದಲು ಯೋಜಿಸಿದಂತೆ ದೊಡ್ಡಮನೆಯ ಪಡಸಾಲೆಯೊಳಗೆ (ಹುಸಿ, ಜಗಲಿ) ಒಂದು ಕೋಣೆಯನ್ನು ಇದಕ್ಕಾಗಿ ಬಳಸುತ್ತಾರೆ. 'ಅಲ್ಲೀಕೋಟೆ' ಎಂದರೆ ಇಲ್ಲಿ ಒಂದು ಸಣ್ಣ ಊರೇ ಆಗಿರುತ್ತದೆ. ಪೂರ್ತಿಯಾಗಿ ಒಂದು ಅಂಕಣದಷ್ಟು ಸ್ಥಳವನ್ನು ನಡುವೆ ಬಿಟ್ಟು ಅದರ ಸುತ್ತಲು ಮೊಣಕಾಲೆತ್ತರ ಕೊತ್ತಳದಂತೆ ಕೋಟೆಗೋಡೆ ಕಟ್ಟುತ್ತಾರೆ. ಹಿಂಬದಿಯ ಮೂರೂ ಮಗ್ಗಲಿಗೆ ನಟ್ಟನಡುವೆ ಗೋಡೆಗಳಿಗಿಂತ ಒಂದು ಗೇಣು ಎತ್ತರವಾದ ಚೌಕಟ್ಟನ್ನಿಡುವರು. ಎದುರಿಗಿನ ಗೋಡೆಯಲ್ಲಿನ ನಟ್ಟನಡುವಿನ ಚೌಕಟ್ಟು ಅದಕ್ಕಿಂತಲೂ ಸ್ವಲ್ಪ ಎತ್ತರವಿರುವುದು. ಇದುವೇ ಆ ಕೋಟೆಗೋಡೆಯ ಹೆಬ್ಬಾಗಿಲು. ಕೋಟೆ ಗೋಡೆಯ ನಾಲ್ಕೂ ಮೂಲೆಗೂ ನಾಲ್ಕು ಉತ್ತಮವಾಗಿ ಬೆಳೆದ ಸಸಿ ಬೆಳೆಸಿದ ಹರಿವಾಣಗಳನ್ನು ಇಡುತ್ತಾರೆ. ಇವುಗಳು ಆ ಊರ ಹೊರಗಿನ ಹೊಲಗಳು. (ಇವು ಸಾಂಕೇತಿಕವಾಗಿ ಬಳಕೆಯಾಗುತ್ತವೆ). ಕೋಟೆ ಗೋಡೆಯ ಒಂದೊಂದು ಮೂಲೆಗೂ ಒಂದೊಂದು ಕುಟುಂಬದ ಮನೆಗಳು ಅವುಗಳಿಗೆ ಕಿಟಕಿ ಬಾಗಿಲುಗಳು ಇರುವುದರೊಂದಿಗೆ ಅಡಿಗೆಮನೆ ಬಾಣಂತಿಯ ಕೋಣೆ, ಬಚ್ಚಲುಮನೆ ಮನೆಯಲ್ಲಿ ಕಾಣಿಸುವಂತೆ ತೊಟ್ಟಿಲು ಮುಂದೆ ಅಜ್ಜಿಯೊಬ್ಬಳು ಕಾಳು ಹಸನುಮಾಡುತ್ತ ಕುಳಿತಿರುವ ಭಂಗಿಯ ಮೂರ್ತಿಶಿಲ್ಪ. ಇನ್ನೊಂದು ಭಾಗದಲ್ಲಿ ಸರ್ಕಸ್ಸು ಇಲ್ಲವೆ ನಾಟಕ ನಡೆದಿರುವ ಹಾಗೆ ಕಟ್ಟಿಗೆಯ ಸಣ್ಣ ಕುರ್ಚಿಗಳು ಅವುಗಳ ಮೇಲೆ ಕರ್ಪೂರದಿಂದ ಮಾಡಿದ ಗೊಂಬೆಗಳು ಪ್ರೇಕ್ಷಕ ಸಮುದಾಯ ಮತ್ತೊಂದು ಕಡೆಗೆ ಹೂದೋಟ ಅಂಗಡಿಗಳು, ಊರಿನ ಓಣಿಗಳು ಬಾವಿ, ನೀರು ತರುವ ದೃಶ್ಯದ ಶಿಲ್ಪಗಳು, ಇತ್ಯಾದಿ ಒಂದು ಊರಿನ ದೃಶ್ಯವೆಲ್ಲ ಇಲ್ಲಿ ಎಳೆಯ ಹುಡುಗಿಯರ ಕಲ್ಪನೆಗಳು ಮಣ್ಣಿನಲ್ಲಿ ಕಟ್ಟಿಗೆಯಲ್ಲಿ ಕರ್ಪೂರ ಇತ್ಯಾದಿ ಮಾಧ್ಯಮಗಳಲ್ಲಿ ಆಕಾರ ಪಡೆದಿರುತ್ತವೆ. ಈ ಸಂದರ್ಭದಲ್ಲಿ ಊರಿನ ಜಿನಗಾರ, ಬಡಿಗ, ಚಿತ್ರಗಾರ, ಕುಂಬಾರ, ಹೂಗಾರರು ಈ ಮಕ್ಕಳ ಅಲ್ಲೀಕೋಟೆಯ ವಾಸ್ತುಶಿಲ್ಪ, ಮೂರ್ತಿಶಿಲ್ಪ ವಿನ್ಯಾಸಗಳಲ್ಲಿ ವರ್ಣಗಾರಿಕೆಯಲ್ಲಿ ಪಾಲುದಾರರಾಗಿ ಕೆಲಸಮಾಡುತ್ತಾರೆ. ಒಂದೊಂದು ಓಣಿಯಲ್ಲಿಯ ಹುಡುಗಿಯರು ತಮ್ಮ ತಮ್ಮ ಅಲ್ಲೀಕೋಟೆ ಕಲಾತ್ಮಕವಾಗಿ ಜನರಿಂದ ಪ್ರಶಂಸೆ ಪಡೆಯಬೇಕೆಂದು ಸಾಕಷ್ಟು ಪ್ರಯತ್ನಪಡುತ್ತಾರೆ.

ಹೀಗೆ ಕೋಟೆಗೋಡೆಯ ವಾಸ್ತುವಿನ್ಯಾಸ ರಚನೆಯಾದ ಮೇಲೆ ಅದರ ನಡುವೆ ಎತ್ತರವಾದ ಒಂದು ಹುಡೆಯನ್ನು ಮಾಡಿ ಅದರ ಮೇಲೆ ಮಣ್ಣಿನಿಂದ ಬಸವಣ್ಣನ ಮೂರ್ತಿಯನ್ನು ಕುಂಬಾರರಿಂದ ಮಾಡಿಸಿ ಅಲ್ಲಿ ಇಟ್ಟು, ಪೂಜಿಸುತ್ತಾರೆ. ಅದರ ಮುಂದೆ ಒಂದು ಚಿಕ್ಕದಾದ ಗೋದಲಿಯನ್ನಿಟ್ಟು, ಅದರಲ್ಲಿ ಒಣ ಹುಲ್ಲನ್ನು ಹಾಕಿ ಬಸವಣ್ಣನಿಗೆ ತಿನ್ನಲು ಇಡುತ್ತಾರೆ. ಸುತ್ತಲೂ ಅರಿಷಿಣ, ಕುಂಕುಮದ ತಟ್ಟೆ ಮತ್ತು ವಿವಿಧ ರೀತಿಯ ಹಣ್ಣುಗಳು ಫಲಹಾರದ ವೈವಿಧ್ಯಮಯವಾದ ವಸ್ತುಗಳಿಂದ

ಅಲಂಕರಿಸಿರುತ್ತಾರೆ. ಕೋಟೆಯ ನಾಲ್ಕು ಮೂಲೆಯ ಬದಿಗೂ ನಾಲ್ಕು ಎತ್ತರವಾದ ಸಮೆಗಳನ್ನಿಟ್ಟು ಎಣ್ಣೆಹಾಕಿ ಸುತ್ತಲೂ ದೀಪ ಹಚ್ಚಿರುತ್ತಾರೆ. ಇದನ್ನು ಅಲ್ಲೀಕೋಟೆಗೆ ಬೆಳಕು ಮಾಡುವುದು ಎನ್ನುತ್ತಾರೆ.

ಈ ಸಂದರ್ಭದಲ್ಲಿ ಕಸೂತಿಯ ವಿವಿಧ ಹೆಣಿಗೆಯ ಚಿತ್ರವಿನ್ಯಾಸದ ವಸ್ತುಗಳು ಬಣ್ಣ ಬಣ್ಣದ ಗಾಜಿನ ಗೊಂಬೆಗಳು, ಕಟ್ಟಿಗೆಯ ಮಕ್ಕಳ ವಿವಿಧ ರೀತಿಯ ವರ್ಣರಂಜಿತ ಆಟಿಗೆಯ ವಸ್ತುಗಳು, ಅಂದ ಚಂದದ ನೂರಾರು ಕಲಾತ್ಮಕ ವಸ್ತುಗಳು ಇಲ್ಲಿ ಸುಂದರವಾಗಿ ವಿನ್ಯಾಸಗೊಂಡಿರುತ್ತವೆ. ವರ್ಷದುದ್ದಕ್ಕೂ ಮನೆಯಲ್ಲಿ ಪೆಟ್ಟಿಗೆಯಲ್ಲಿ ಧೂಳಿನಿಂದ ಆವರಿಸಿದ ಜನಪದ ಈ ಕಲಾತ್ಮಕ ವಸ್ತುಗಳು ಸ್ವಚ್ಛಗೊಂಡು ಅಲ್ಲೀಕೋಟೆಯ ಅಲಂಕಾರಕ್ಕಾಗಿ ಸಿದ್ಧಗೊಳ್ಳುತ್ತವೆ. ಆ ವಸ್ತುಗಳನ್ನು ಇಲ್ಲಿ ಎರವಲಾಗಿಯೂ ತಂದು ಅಲಂಕರಿಸುವುದುಂಟು. ಇಷ್ಟೆಲ್ಲಾ ಆದನಂತರ ಅಲ್ಲೀಕೋಟೆಗೋಡೆಯ ಮಧ್ಯದ ಹುಡೆದ ಮೇಲಿನ ಬಸವಣ್ಣನ ಎದುರು ಇನ್ನೊಂದು ಚಿಕ್ಕಬಸವಣ್ಣನ ಮೂರ್ತಿಯನ್ನು ತಂದು ಪೂಜಿಸುವ ಸಂಪ್ರದಾಯ ನಡೆಯುತ್ತದೆ. ಹೀಗೆ ಅಲ್ಲೀಕೋಟೆಯ ವಾಸ್ತುವಿನ್ಯಾಸ ಮೂರ್ತಿಶಿಲ್ಪಗಳ ಅಲಂಕಾರಿಕೆಗಳು ದ್ವಾದಶಿಯ ರಾತ್ರಿಯಿಂದ ಧನತ್ರಯೋದಶಿಯ ಬೆಳಗು ಹರಿಯುವುದರೊಳಗೆ ಸಂಪೂರ್ಣವಾಗಿ ಸಿದ್ಧಗೊಳ್ಳುತ್ತವೆ.

## ೧.೩. ಅಲ್ಲೀಕೋಟೆಯಲ್ಲಿ ದೊಡ್ಡ ಹಾಗೂ ಸಣ್ಣ ಬಸವಣ್ಣನ ಮೂರ್ತಿಶಿಲ್ಪದ ಪ್ರತಿಷ್ಠಾಪನೆ

ಅಲ್ಲೀಕೋಟೆಯ ವಾಸ್ತುವಿನ್ಯಾಸ, ಶಿಲ್ಪದ ಹಾಗೂ ಅಲಂಕಾರಗಳಾದ ಮೇಲೆ ಮನೆಯ ಹಿರಿಯ ತಾಯಿಯೊಬ್ಬಳನ್ನು ಅಲ್ಲೀಕೋಟೆಯ ಉಸ್ತುವಾರಿಗಾಗಿ ನಿಯಮಿಸಿರುತ್ತಾರೆ. ಆಕೆಯೂ ದಿನಾಲು ಹರಿವಾಣಗಳಲ್ಲಿರುವ ಸಸಿಗಳಿಗೆ ನೀರು ಹಾಕುವುದು ದೀಪಗಳಿಗೆ ಎಣ್ಣೆ ಹಾಕುವುದು. ದೀಪ ಆರದಂತೆ ನೋಡಿಕೊಂಡು ಹೋಗುವುದು; ದಿನಾಲು ಬಸವಣ್ಣನಿಗೆ ಪೂಜೆ, ನೈವೇದ್ಯ ಮುಂತಾದ ಕೆಲಸಗಳನ್ನು ಮಾಡುತ್ತಾಳೆ. ಈ ತಾಯಿಯನ್ನು ಇಲ್ಲಿ 'ಬಸಪ್ಪನ ತಾಯಿ' ಎಂದು ಅಲ್ಲೀಕೋಟೆಯ ಆಟ ಮುಗಿಯುವವರೆಗೆ ಕರೆಯುತ್ತಾರೆ.

ತ್ರಯೋದಶಿಯ ದಿವಸ ಸಂಜೆಯ ಮುಂದೆ ಅಲ್ಲೀಕೋಟೆಯ ಹುಡೆಯಲ್ಲಿ ಸಣ್ಣ ಹಾಗೂ ದೊಡ್ಡ ಬಸವಣ್ಣನನ್ನು ಪ್ರತಿಷ್ಠಾಪನೆ ಮಾಡುವ ಒಂದು ಕಾರ್ಯಕ್ರಮವಿದೆ. ಎರಡೂ ಬಸವಣ್ಣಗಳಿಗೂ ಇಲ್ಲಿ ಬಸಪ್ಪನೆಂದು ಕರೆಯಲಾಗುತ್ತದೆ. ಸಾಯಂಕಾಲ ಈ ಬಸಪ್ಪನ ತಾಯಿಯನ್ನು ಊರಲ್ಲಿ ಬಸವಣ್ಣನ ಗುಡಿಯಿಂದ ಕರೆದುಕೊಂಡು ಬರುವ ಕೆಲಸ ನಡೆಯುತ್ತದೆ. ಒಂದು ಹುಡುಗಿಯೂ ಅರಿಷಿಣ ಕುಂಕುಮ ಮಂಡಕ್ಕಿ (ಚುರಮುರಿ)ಗಳನ್ನು ಪೂಜೆಯ ವಸ್ತುಗಳನ್ನು ತೆಗೆದುಕೊಂಡು ಮುಂಚಿತವಾಗಿಯೇ ಬಸವಣ್ಣನ ದೇವಸ್ಥಾನಕ್ಕೆ ಹೋಗಿ ಕುಳಿತುಕೊಳ್ಳುತ್ತಾಳೆ. ಇವಳನ್ನು ಬಸಪ್ಪನ ತಾಯಿ ಎಂದು ಕರೆಯುತ್ತಾರೆ. ಈಕೆಯನ್ನು ಕರೆತರಲು ಓಣಿಯ ಹುಡುಗಿಯರೆಲ್ಲ ಅಲ್ಲೀಕೋಟೆಯನ್ನು ಮತ್ತಷ್ಟು ರಂಗವಲ್ಲಿ, ತಳಿರು-ತೋರಣಗಳಿಂದ ಅಲಂಕರಿಸಿ ಎಲ್ಲರೂ ಕೂಡಿ ಕೈಯಿಂದ ಕೋಟೆ ಕಟ್ಟಿಕೊಂಡು ಬೀದಿಯಲ್ಲಿ ಹಾಡು ಹೇಳುತ್ತ ಬಸವಣ್ಣನ ದೇವಸ್ಥಾನಕ್ಕೆ ಬರುತ್ತಾರೆ. ಅಲ್ಲಿ ಬಸವಣ್ಣನಿಗೆ ಪೂಜೆ ಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ಬಸವಣ್ಣನಿಗೆ ನೀರು ಕುಡಿಸುವ ಕಾರ್ಯಕ್ರಮವೊಂದು ನಡೆಯುತ್ತದೆ.

ಬಸವಣ್ಣನ ದೇವಸ್ಥಾನಕ್ಕೆ ಹೋಗುವಾಗ ಮೊದಲೇ ಎಲ್ಲ ಹುಡುಗಿಯರು ಒಂದೊಂದು ಗಿಂಡಿಯನ್ನು ತಂದಿರುತ್ತಾರೆ. ಆ ಸಣ್ಣ ಗಿಂಡಿಗಳಿಗೆ ಅಲ್ಲೀಗಿಂಡಿಗಳೆಂದು ಕರೆಯುತ್ತಾರೆ. ಕೆಲವರು ಈ ಅಲ್ಲೀಗಿಂಡಿಗಳನ್ನು ತರದೇ ಇದ್ದವರು ಚೆಂಡುಹೂಗಳನ್ನು ನೀರಿನಲ್ಲಿ ಎದ್ದಿ ಬಸವಣ್ಣನಿಗೆ ಸಿಂಪಡಿಸುತ್ತಾರೆ. ಗಿಂಡಿಯನ್ನು ತಂದವರು ಅದರಲ್ಲಿಯ ನೀರನ್ನು ಬಸವಣ್ಣನ ಸುತ್ತಲು ಸಿಂಪಡಿಸುತ್ತ ದುಂಡಗೆ ತಿರುಗುತ್ತ ಹಾಡು ಹೇಳುತ್ತಾರೆ. ಕೆಲವು ಭಾಗದಲ್ಲಿ ಬಸವಣ್ಣನನ್ನು ಕೆರೆ, ಬಾವಿ, ಜಲಾಶಯದ ಹತ್ತಿರ ಹೋಗಿ ಪೂಜಿಸಿ ಹಾಡು ಹೇಳಿ ಆಟ ಆಡಿ ಫಲಹಾರ ತಿಂದು ಬರುವ ಸಂಪ್ರದಾಯವಿದೆ. ಈ ಸಂದರ್ಭದಲ್ಲಿ ಹಾಡುವ ಹಾಡು, ಹೀಗಿದೆ:

ಒಂದು ಸುತ್ತಿನ ಕ್ವಾಟಿ
ಅದರೊಳು ಹೊಂದಿ ನಿಂತನು ಬಸವ
ಬಸವಗ ಬಸವನ್ನಿರೆ
ಬಸವನ ಪಾದಕ ಶರಣೆನ್ನಿರೆ||

ಹೀಗೆ ಹತ್ತು ಸುತ್ತಿನವರೆಗೂ ಹಾಡು ಹೇಳುತ್ತಾರೆ. ನಂತರ ತಮ್ಮ ಗಿಂಡಿಯ ನೀರನ್ನು ಹೂವನ್ನು ತೂರಾಡುತ್ತ "ಅಲ್ಲೋ ಪಿಲ್ಲೋ ಗಿಂಡಿಯ ಬಸವ" ಎಂದು ಕುಣಿದಾಡುತ್ತಾರೆ. ಇದನ್ನು ಬಸಪ್ಪನಿಗೆ ನೀರು ಕುಡಿಸುವುದು ಎಂದು ಹೇಳುತ್ತಾರೆ. ಇಲ್ಲಿಂದ ನಂತರ ಬಸಪ್ಪನ ತಾಯಿಯನ್ನು ಸಣ್ಣ ಹಾಗೂ ದೊಡ್ಡ ಬಸವಣ್ಣನನ್ನು ತಂದು ಮತ್ತೆ ಮೆರವಣಿಗೆಯಲ್ಲಿ ಅಲ್ಲೀಕೋಟೆಗೆ ಕರೆದೊಯ್ಯುತ್ತಾರೆ. ಮೊದಲು ಇದ್ದ ಸ್ಥಳದಲ್ಲಿ ದೊಡ್ಡ ಬಸವಣ್ಣ ಹಾಗೂ ಅವನ ಎದುರಿಗೆ ಸಣ್ಣಬಸವಣ್ಣನ ಮೂರ್ತಿಯನ್ನು ಇಟ್ಟು ಪೂಜಿಸುತ್ತಾರೆ. ಇದಕ್ಕೆ ಬಸವಣ್ಣನ ಪ್ರತಿಷ್ಠಾಪನ ಮಾಡುವುದೆನ್ನುತ್ತಾರೆ. ಇಲ್ಲಿಯೂ ಹಾಡು ಹೇಳಿ ಫಲಹಾರ ಮಾಡಿ ರಾತ್ರಿ ತಮ್ಮ ತಮ್ಮ ಮನೆಗಳಿಗೆ ಹೋಗುತ್ತಾರೆ. ಇದೇ ರೀತಿಯ ಕಾರ್ಯಕ್ರಮಗಳು ಒಂದುವಾರದವರೆಗೆ ಅಂದರೆ ಕಡೆ ಪಂಚಮಿಯವರೆಗೆ ನಡೆಯುತ್ತವೆ.

ಕೆಲವು ಊರುಗಳಲ್ಲಿ ಊರಲ್ಲಿ ಅಲ್ಲೀಕೋಟೆಯನ್ನು ನಿರ್ಮಿಸಿಕೊಂಡು ಆಟವಾಡುವ ಬದಲು ಒಂದು ದಿನ ಊರಹೊರಗೆ ನೀರಿರುವ ಜಲಾಶಯ ಕೆರೆ, ಬಾವಿ, ನದಿ, ಹಳ್ಳಗಳ ಹತ್ತಿರ ಹೋಗಿ ಮಣ್ಣಿನಿಂದ ಬಸವಣ್ಣನನ್ನು ಮಾಡಿ ಪೂಜಿಸಿ ತಾವು ತಂದ ತಿಂಡಿ.ತಿನಿಸುಗಳನ್ನು ತಿಂದು ಸಂತೋಷದಿಂದ ಹಾಡು ಹೇಳಿ ಆಟವಾಡಿ (ಗಂಡ-ಹೆಂಡಿರ ಆಟ) ವನಭೋಜನ ಮಾಡಿ ಬರುವ ಸಂಪ್ರದಾಯವಿದೆ. ಇದಕ್ಕೆ ಅಲ್ಲೀಕೋಟೆಗೆ ಹೋಗುವುದು ಎಂದು ಕರೆಯುತ್ತಾರೆ.

ಅಲ್ಲೀಕೇರಿಗೆ ಹೋಗನು ಬರತೀರೇನಿರೇ
ಒಲ್ಲದಿದ್ದರೆ ಇಲ್ಲೇ ನೀವು ಇರತೀರೇನಿರೇ
ಕಲ್ಲವ್ವ ಮಲ್ಲವ್ವ ಕೂಡಿಕೊಂಡು ದೀವಳಗಿ ಹಬ್ಬದೊಳು
ಉಲ್ಲಾಸದಿಂದ ಅಲ್ಲಮಪ್ರಭುವಿನ ಮರೆತೀರೇನ್ರೆ ಇಲ್ಲೆ ಇರತೀರೇನ್ರೆ||

ಶಿಶುನಾಳ ಶರೀಫರು ಈ ಅಲ್ಲಿಕೇರಿಯ ಕುರಿತಾಗಿ ಬರೆದ ಹಾಡೊಂದು ಇದ್ದು ಉತ್ತರ ಕರ್ನಾಟಕದಲ್ಲಿ ತುಂಬಾ ಜನಪ್ರಿಯತೆಯನ್ನು ಪಡೆದಿದೆ.

## ೨. ಅರಳೆಲೆ ಬಸವನ ಮೂರ್ತಿಶಿಲ್ಪದ ಆಚರಣೆ

ಬಸವಣ್ಣ ರೈತರ ಬದುಕಿನ ಆರಾಧ್ಯ ದೇವರು. ಅವನನ್ನು ಅನೇಕ ರೀತಿಯಲ್ಲಿ ಪೂಜಿಸುತ್ತಾರೆ. ವಿಶೇಷವಾಗಿ ಹುಡುಗಿಯರು ಶೀಗಿ ಹುಣ್ಣಿವೆಯ ಚರಗದೂಟಮಾಡಿ ಮನೆಗೆ ಬರುವಾಗ ಮಳಲು ತರುವ ಸಂಪ್ರದಾಯವಿದೆ. ಆ ಮಣ್ಣಿನಿಂದ ಕುಳಿತ ಬಸವಣ್ಣನ ಮೂರ್ತಿ ಮಾಡಿ ಪತ್ರಿ-ಪುಷ್ಪಗಳಿಂದ ಒಂದು ಸುಂದರವಾದ ಮಂಟಪದಲ್ಲಿ ಸ್ಥಾಪಿಸಿ ಪೂಜೆ ಸಲ್ಲಿಸುವ ಆಚರಣೆಯಿದೆ. ಕೆಲವರು ಊರೊಳಗಿನ ಬಸವಣ್ಣನ ಗುಡಿಗೆ ಹಾಡುಹೇಳುತ್ತ ಕೋಲಾಟವಾಡುತ್ತ ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ. ಇನ್ನು ಕೆಲವು ಕಡೆಗೆ ಹುಡುಗಿಯರು ಮಂಗಳಾರತಿಯೊಂದಿಗೆ ಊದಿಸುತ್ತ, ಬಾರಿಸುತ್ತ ಜಲಾಶಯದ ಹತ್ತಿರ ಮಣ್ಣನ್ನು ತರುವುದು ರೂಢಿಯಲ್ಲಿದೆ. ಇದಕ್ಕೆ ಮಳಲು ತರುವುದು ಎಂದು ಹೆಸರು. ಈ ಮಳಲಿನಿಂದ ಬಸವಣ್ಣನನ್ನು ಮಾಡಿ ಪೂಜಿಸುವುದಕ್ಕೆ ಅರಳೆಲೆ ಬಸವನ ಮೂರ್ತಿಶಿಲ್ಪದ ಆಚರಣೆಯೆಂದು ಕರೆಯುತ್ತಾರೆ. ಇದು ಅಲ್ಲೀಕೇರಿಯ ಇನ್ನೊಂದು ರೂಪದ ಆಚರಣೆ ಎನ್ನಬಹುದು.

## ೩. ಮಣ್ಣೆತ್ತಿನ ಬಸವಣ್ಣನ ಮೂರ್ತಿಶಿಲ್ಪಗಳ ಆಚರಣೆ

ಮಣ್ಣೆತ್ತಿನ ಅಮಾವಾಸ್ಯೆಯಂದು ಸಾಮಾನ್ಯವಾಗಿ ಎಲ್ಲ ಹಳ್ಳಿಗಳಲ್ಲಿ ಎಲ್ಲರ ಮನೆಗಳಲ್ಲಿ ಮಣ್ಣಿನಿಂದ ಮಾಡಿದ ಎತ್ತುಗಳ ಮೂರ್ತಿಶಿಲ್ಪಗಳನ್ನು ಮನೆಯಲ್ಲಿ ಜಗಲಿಯಲ್ಲಿಟ್ಟು ಪೂಜಿಸುವ ಆಚರಣೆ ಸರ್ವಸಾಮಾನ್ಯವಾದುದಾಗಿದೆ.

ಹಳ್ಳಿಗಳಲ್ಲಿ ಕುಂಬಾರರು ಹೆಚ್ಚಾಗಿ ಈ ಮಣ್ಣಿನ ಎರಡು ಜೋಡಿ ನೀಟಾದ ಕೋಡುಗಳುಳ್ಳ ಜೋಡೆತ್ತುಗಳನ್ನು ಮಾಡುತ್ತಾರೆ. ಮತ್ತು ಆಹಾರ ತಿನ್ನಲೆಂದು ಅವುಗಳ ಮುಂದೆ ಒಂದು ಸಣ್ಣ ಡೋಣಿಯನ್ನು ಮಾಡಿ ಊರಲ್ಲಿಯ ಪ್ರತಿ ಮನೆಮನೆಗೆ ಕೊಟ್ಟು ಅದಕ್ಕೆ ಪ್ರತಿಯಾಗಿ ಬ್ಯಾಜವನ್ನು ಕಾಳೂಕಡಿಯ ರೂಪದಲ್ಲಿ ಒಯ್ಯುತ್ತಾರೆ. ಎತ್ತುಗಳ ನಿರ್ಮಾಣದಲ್ಲಿ ಕುಂಬಾರರ ಕಲಾವಂತಿಕೆ ವಿಶೇಷವಾಗಿರುತ್ತದೆ. ಈ ಮಣ್ಣಿನ ಜೋಡೆತ್ತುಗಳಿಗೆ ಮನೆಯಲ್ಲಿ ಗಂಡು ಹುಡುಗರು ವಿಶೇಷ ಅಲಂಕಾರ ಮಾಡುತ್ತಾರೆ. ಅವುಗಳ ಕೋಡುಗಳಿಗೆ ಬಣ್ಣ ಹಚ್ಚಿ ಕೊರಳಲ್ಲಿ ಗೆಜ್ಜೆ ಮುಂತಾದ ಎತ್ತುಗಳಿಗೆ ಹಾಕುವ ಆಭರಣಗಳ ಅಲಂಕಾರ ಈ ಎತ್ತುಗಳಿಗೂ ಮಾಡಿ ಅವುಗಳಿಗೂ ಜೂಲ ಹಾಕಿ ಮನೆಯಲ್ಲಿ ವಿಶೇಷವಾದ ಪೂಜೆ ಸಲ್ಲಿಸುತ್ತಾರೆ. ಮರುದಿವಸ ಇವುಗಳನ್ನು ಮನೆಯ ಗೂಡುಗಳಲ್ಲಿ ಇಡುವ ಸಂಪ್ರದಾಯವಿದೆ.

ಇನ್ನು ಕೆಲವು ಭಾಗದಲ್ಲಿ ಶ್ರಾವಣಮಾಸದ ನಾಗರಪಂಚಮಿಯ ಮರುದಿನವೇ ಕುಂಬಾರರಿಂದ ಆಗಲೀ ಇಲ್ಲವೇ ತಾವೇ ಆಗಲಿ ಐದು ಮಣ್ಣಿನ ಎತ್ತುಗಳನ್ನು ಮಾಡಿ ಅವು ಎಲ್ಲಿಯೂ ಭಿನ್ನವಾಗದಂತೆ ಕಾಳಜಿ ವಹಿಸಿ ಹೊಲಕ್ಕೆ ತಂದು ಅಲ್ಲಿ ಅವುಗಳಿಗೆ ಪೂಜೆ ಸಲ್ಲಿಸಿ ಅಲ್ಲಿಯೇ ಪ್ರತಿಷ್ಠಾಪಿಸುವುದು ಉಂಟು. ಆ ಸಂದರ್ಭದಲ್ಲಿ ಬನದೂಟ ಮಾಡಿ ಬರುತ್ತಾರೆ.

ಮತ್ತೆ ಕೆಲವು ಭಾಗದಲ್ಲಿ ಮನೆಯಲ್ಲಿ ಮಣ್ಣೆತ್ತಿನ ಪೂಜೆ ಮಾಡುವುದಲ್ಲದೆ ಓಣಿಗಳಲ್ಲಿ ಎರಡು ಮೂರು ಫೂಟು ಎತ್ತರದವರೆಗೆ ದೊಡ್ಡದಾದ ಕುಳಿತ ಭಂಗಿಯ ಮಣ್ಣಿನ ಬಸವಣ್ಣನನ್ನು

ಮಾಡಿಸಿ ಸಾಮೂಹಿಕವಾಗಿ ಓಣಿಯ ಜನರೆಲ್ಲ ಪೂಜಿಸುವ ಆಚರಣೆಯೂ ಇದೆ. ಓಣಿ ಓಣಿಗಳಲ್ಲಿ ವಿವಿಧ ನಮೂನೆಯ ಬಸವಣ್ಣನ ಮೂರ್ತಿಶಿಲ್ಪಗಳು ಕಲಾತ್ಮಕವಾಗಿ ರಚನೆಗೊಂಡು ಪೂಜೆಗೊಳ್ಳುತ್ತವೆ. ಸ್ಥಳೀಯ ಕಲಾವಿದರ ಕಲ್ಪನಾ ಶ್ರೀಮಂತಿಕೆಯೆಲ್ಲ ಈ ಮೂರ್ತಿಶಿಲ್ಪದಲ್ಲಿ ಕಾಣಬಹುದಾಗಿದೆ.

ಒಟ್ಟಾರೆ ಅಲ್ಲೀಕೋಟೆ, ಅಲ್ಲೀಕೇರಿ, ಅರಳೆಲೆ ಬಸವ, ಮಣ್ಣೆತ್ತಿನ ಬಸವಣ್ಣ ಇವೆಲ್ಲವು ಮಣ್ಣಿನ ಬಸವನ ಮೂರ್ತಿಶಿಲ್ಪದ ಒಂದೇ ಸಂಪ್ರದಾಯದ ಭಿನ್ನ ಭಿನ್ನ ರೂಪಗಳೆಂದು ಹೇಳಬಹುದು.

## ೪. ಹುತ್ತಪ್ಪ (ನಾಗಪ್ಪ) ಶಿಲ್ಪದ ಆಚರಣೆ

ನಾಗರ ಪಂಚಮಿ ಸ್ತ್ರೀಯರು ಆಚರಿಸುವ ಬಹುದೊಡ್ಡ ಹಬ್ಬ. ಈ ಸಂದರ್ಭದಲ್ಲಿ ಹುತ್ತಪ್ಪ(ನಾಗಪ್ಪ)ನಿಗೆ ಪೂಜೆ ಮಾಡಿ ಹಾಲು ಹೊಯ್ಯುವ ಸಂಪ್ರದಾಯವಿದೆ.

ಬಸವಣ್ಣನ ಶಿಲ್ಪದ ಆಚರಣೆಯಂತೆ ಹುತ್ತಪ್ಪನ ಶಿಲ್ಪದ ಸಂಪ್ರದಾಯವು ತುಂಬಾ ಆಕರ್ಷಕವಾಗಿ ನಡೆಯುತ್ತದೆ. ಪ್ರತಿಯೊಂದು ಮನೆಮನೆಗಳಲ್ಲಿ ಹುತ್ತಪ್ಪ(ನಾಗಪ್ಪ) ನನ್ನು ಮಾಡಿ ಪೂಜಿಸುತ್ತಾರೆ. ಮಣ್ಣಿನ ಪುಟ್ಟದಾದ ನಾಗಪ್ಪನನ್ನು ಬಡಿಗೇರರು ಹೂಗಾರರು ಕೆಲವು ಊರಲ್ಲಿ ಕೆರೆ ಹಳ್ಳಗಳ ಹತ್ತಿರದಿಂದ ಮಣ್ಣನ್ನು ತಂದು ನಾಗಪ್ಪನನ್ನು ಮಾಡಿ ಮನೆಮನೆಗೆ ಹಬ್ಬದ ದಿನ ತಂದು ಕೊಟ್ಟು ಮರುದಿನ ಪಂಚಮಿಯಂದು ಎಳ್ಳು ಉಂಡಿ, ಹಣ ಇತ್ಯಾದಿ ಧಾನ್ಯಗಳನ್ನು ಬ್ಯಾಜವಾಗಿ ಬಂದು ಒಯ್ಯುವ ಸಂಪ್ರದಾಯವು ಇದೆ. ಇತ್ತೀಚೆಗೆ ನಾಗಪ್ಪನ ಶಿಲ್ಪಗಳಿಗೆ ಬಣ್ಣದ ಲೇಪನ ಮಾಡಲಾಗುತ್ತಿದೆ. ಹಾವಿನ ಆಕಾರದ ಈ ಶಿಲ್ಪಗಳಲ್ಲಿ ಹೆಡೆಯೂ ಪ್ರಮುಖವಾಗಿ ಕಾಣಿಸುವಂತೆ ರಚಿಸಿರುವುದು ವೈಶಿಷ್ಟ್ಯ.

ಇನ್ನು ಕೆಲವು ಊರಲ್ಲಿ ಮನೆಯಲ್ಲಿ ನಾಗಪ್ಪನನ್ನು ಪೂಜಿಸಿ ಹಾಲೆರೆಯುವುದಷ್ಟೆ ಅಲ್ಲದೆ ತಮ್ಮ ತಮ್ಮ ಕೇರಿಗಳಲ್ಲಿ ದೊಡ್ಡ ಗಾತ್ರದ ಅಂದರೆ ಸುಮಾರು ಐದು ಆರು ಫೂಟಿನಷ್ಟು ಎತ್ತರವಾದ ಮಣ್ಣಿನ ಹುತ್ತಪ್ಪನನ್ನು ಸಾಮೂಹಿಕವಾಗಿ ರಚನೆ ಮಾಡಿ ಪೂಜಿಸುತ್ತಾರೆ. ಹುತ್ತನ್ನು ಅನುಕರಿಸಿ ಹುತ್ತಿನಾಕಾರದ ವಿನ್ಯಾಸ ಮಾಡಿ ಅದಕ್ಕೆ ಸುತ್ತುವರೆದು ಹುತ್ತಿನ ಮೇಲೆ ಹೆಡೆ ಎತ್ತಿ ನಿಂತ ಭಂಗಿಯ ಹುತ್ತಪ್ಪನ ಶಿಲ್ಪವು ತುಂಬಾ ಆಕರ್ಷಕವಾಗಿ ಪ್ರತಿ ಕೇರಿಗಳಲ್ಲಿ ಕಲಾತ್ಮಕವಾಗಿ ರಚನೆಗೊಂಡಿರುತ್ತವೆ. ಆಯಾ ಓಣಿಯವರು ತಮ್ಮ ತಮ್ಮ ಓಣಿಯ ಹುತ್ತಪ್ಪನನ್ನು ಸಾಮೂಹಿಕವಾಗಿ ಪೂಜಿಸಿ ಹಾಲೆರೆಯುವ ಸಂಪ್ರದಾಯವು ಇದೆ.

ಮರುದಿವಸ ಈ ದೊಡ್ಡ ಗಾತ್ರದ ಹುತ್ತಪ್ಪನ ಮೂರ್ತಿಶಿಲ್ಪವನ್ನು ವಿಸರ್ಜನೆ ಮಾಡುವ ಕೆಲಸವು ನಡೆಯುತ್ತದೆ. ಹುತ್ತಪ್ಪನನ್ನು ಮತ್ತೆ ಪೂಜಿಸಿ ಅದನ್ನು ಕೆಡಿಸುತ್ತಾರೆ. ಮತ್ತು ಆ ಮಣ್ಣನ್ನು ಆಯಾ ಓಣಿಯ ರೈತರು ತಮ್ಮ ತಮ್ಮ ಹೊಲಗಳಿಗೆ ಒಯ್ದು ಚರಗ ಚಲ್ಲುವಂತೆ ಚಲ್ಲಲಾಗುತ್ತದೆ. ಇದರಿಂದ ಬೆಳೆ ಹುಲುಸಾಗಿ ಬರುತ್ತದೆ. ಫಲ ಹೆಚ್ಚುತ್ತದೆಯೆಂಬ ನಂಬಿಗೆಗಳಿವೆ.

ಹುತ್ತಪ್ಪನ ಶಿಲ್ಪದ ಆಚರಣೆಯಲ್ಲಿ ಅನೇಕ ಹಾಡುಗಳು ಜನಪದಕಥೆಗಳು ವಿಫುಲವಾಗಿ ಸಿಗುತ್ತವೆ. ಸ್ತ್ರೀಪ್ರಧಾನವಾದ ಈ ಮೂರ್ತಿಶಿಲ್ಪದ ಆಚರಣೆಯಲ್ಲಿ ಪುರುಷರು ಕೆಲವು ಪ್ರದೇಶಗಳಲ್ಲಿ ಭಾಗವಹಿಸುವುದು ಕಂಡುಬರುತ್ತದೆ.

## ೫. ಗುಳ್ಳವ್ವನ ಮೂರ್ತಿಶಿಲ್ಪದ ಆಚರಣೆ

ಮಣ್ಣೆತ್ತಿನ ಅಮಾವಾಸೆಯಿಂದ ನಾಗರ ಅಮಾವಾಸೆಯವರೆಗೆ ಆಷಾಢ ತಿಂಗಳಲ್ಲಿ ಬರುವ ನಾಲ್ಕು ಇಲ್ಲವೆ ಐದು ಮಂಗಳ ವಾರಗಳಂದು ಈ ಹಬ್ಬವನ್ನು ಆಚರಿಸಲಾಗುತ್ತಿದೆ. ಸ್ತ್ರೀ ಪ್ರಧಾನವಾದ ಗುಳ್ಳವ್ವನ ಹಬ್ಬವನ್ನು ಸುಮಾರು ಹತ್ತು ಹನ್ನೆರಡು ವರ್ಷದ ಬಾಲಕಿಯರು ವಿಶೇಷವಾಗಿ ಆಚರಿಸುತ್ತಾರೆ.

### ೫.೧. ಗುಳ್ಳವ್ವ 'ಮೂರ್ತಿಶಿಲ್ಪ'ದ ರಚನೆ ಅಲಂಕಾರ ವಿನ್ಯಾಸ

ಗುಳ್ಳವ್ವನ ಮೂರ್ತಿಶಿಲ್ಪದ ರಚನಾವಿನ್ಯಾಸದ ಕಾರ್ಯಕ್ರಮವು ಮಣ್ಣೆತ್ತಿನ ಅಮಾವಾಸೆಯ ಮೊದಲ ಮಂಗಳವಾರದಿಂದ ಪ್ರಾರಂಭಗೊಳ್ಳುತ್ತದೆ. ಕೆಲವು ಕಡೆಗೆ ಹಿಂದಿನ ದಿನ ಬೆಳಗಿನ ವೇಳೆಯಲ್ಲಿ ಒಂದೊಂದು ಓಣಿ ಅಥವಾ ಕೇರಿಯ ಹುಡುಗಿಯರೆಲ್ಲ ಸೇರಿ ಗುಳ್ಳವ್ವನ ಆಚರಣೆಯ ಶಿಲ್ಪಕ್ಕಾಗಿ ಮಣ್ಣುತರಲು ಸಿದ್ಧವಾಗುತ್ತಾರೆ. ಪ್ರತಿಯೊಬ್ಬರು ಅಂದರೆ ಗುಳ್ಳವ್ವನನ್ನು ಇಡುವರು. ತಲೆಯ ಮೇಲೆ ಒಂದೊಂದು ಚೌಕಿಮಣಿ ಅದರ ಮೇಲೆ ತಮಗೆ ಇಷ್ಟವಾದ ತಿಂಡಿ ತಿನಸುಗಳು ಸಾಮಾನ್ಯವಾಗಿ ಹುರಿದ ಅರಳು ಮಂಡಕ್ಕಿ ಹುರಿಗಡಲೆ ಪುಟಾಣಿ ಶೇಂಗಾ, ಚಕ್ಕಲಿ ಅಂಟಿನುಂಡಿ ಹೀಗೆ ಸಿಹಿ ತಿಂಡಿಗಳನ್ನು ಕಟ್ಟಿಕೊಂಡು ಒಯ್ಯಲಾಗುತ್ತದೆ. ಕೆರೆ ಹಳ್ಳ, ನದಿ, ಬಾವಿ ಜಲಾಶಯಗಳಂತಹ ನೀರು ಇರುವ ಸ್ಥಳವನ್ನು ಆಯ್ಕೆ ಮಾಡಿಕೊಂಡು ಹೋಗುತ್ತಾರೆ.

ಓ ಹೋ ಗುಳ್ಳವ್ವನಾಡೋಣ ಬಾ।
ಕೆರಿದಂಡಿ ಮಣ್ಣ ತರೋಣ ಬಾ।
ಗಿಂಡಿಲೆ ನೀರ ಹಾಕೋಣ ಬಾ।
ಕಾಡಿನ ಹೂ ಚುಚ್ಚೋಣ ಬಾ।
ಓ ಹೋ ಗುಳ್ಳವ್ವನಾಡೋಣ ಬಾ॥

ಹೀಗೆ ದಾರಿಯಲ್ಲಿ ಹಾಡು ಹೇಳುತ್ತ ಜಲಾಶಯಗಳಲ್ಲಿ ಎಲ್ಲರೂ ಕಲೆತು ಅರಳನ್ನು ನೀರಿನಿಂದ ಮಿದ್ದಿ ಮಿದ್ದಿ ಮಣ್ಣಿನಿಂದ ಒಂದು ಗೋಲಾಕಾರದ ಸ್ತ್ರೀ ರೂಪದ ಆಕಾರ ಮಾಡುತ್ತಾರೆ. ನಂತರ ಅದನ್ನು ಮಣೆಯ ಮೇಲೆ ಇಟ್ಟು ನೀರನ್ನು ತಂದು ವಿಭೂತಿ ಕುಂಕುಮ ಅರಿಷಣ ಹಾಗೂ ಕಾಡು ಹೂಗಳಿಂದ ಪೂಜೆ ಮಾಡುತ್ತಾರೆ. ಮತ್ತು ತಾವು ತಂದ ತಿಂಡಿ-ತಿನಿಸುಗಳ ನೈವೇದ್ಯಯನ್ನು ಮಾಡಿ ಎಲ್ಲರೂ ಕೂಡಿ ತಮ್ಮಲ್ಲಿ ತಿನಿಸುಗಳನ್ನು ವಿನಿಮಯ ಮಾಡಿಕೊಂಡು ತಿಂದು ಸಂತೋಷದಿಂದ ಆಟಗಳನ್ನು ಆಡಿ ಹಾಡು ಹೇಳುತ್ತಾರೆ.

ಇನ್ನು ಕೆಲವು ಕಡೆಗೆ ಮಣೆಗೆ ಬದಲಾಗಿ ಹೊಸ ಬುಟ್ಟಿಯನ್ನು ಒಯ್ದು ಆ ಬುಟ್ಟಿಯಲ್ಲಿ ಒಣಮಣ್ಣನ್ನು ಹಾಕಿ ಅದರಲ್ಲಿ ಹಸಿಮಣ್ಣಿನ ಗುಳ್ಳವ್ವನ ಸ್ತ್ರೀ ಆಕಾರದ ಮೂರ್ತಿಶಿಲ್ಪವನ್ನು ಮಾಡಿ ಅದಕ್ಕೆ ಮೇಲೆ ಕರಕಿಯನ್ನೋ ಅವರೆ ಹೂವನ್ನೋ ಚುಚ್ಚಿಕೊಂಡು ಮನೆಗಳಿಗೆ ತರುತ್ತಾರೆ. ಸಾಮಾನ್ಯವಾಗಿ ಈ ಮೂರ್ತಿಶಿಲ್ಪವು ಒಂದು ಗುಪ್ಪೆಯಾಕೃತಿಯಲ್ಲಿದ್ದು ಅದಕ್ಕೆ ಮತ್ತೊಂದು ಸಣ್ಣದಾದ ಗುಪ್ಪೆಮಾಡಿ ಮುಖದ ಆಕಾರ ಮಾಡುವುದು ಉಂಟು. ಇದು ಕೆಳಗಡೆ ಚಪ್ಪಟೆಯಾಗಿದ್ದು ಕುಳಿತ

ಭಂಗಿಯಲ್ಲಿರುತ್ತದೆ. ಶರೀರದ ಯಾವುದೇ ಅಂಗಾಂಗಗಳು ಇರುವುದಿಲ್ಲ ಮತ್ತು ಪ್ರಮಾಣಬದ್ಧತೆ ಇತ್ಯಾದಿ ಕಂಡುಬರುವುದಿಲ್ಲ.

### ೫.೨. ಗುಳ್ಳವ್ವನ ಕುಳ್ಳಿರಿಸುವ ಕಾರ್ಯಕ್ರಮ

ಮನೆಗೆ ಗುಳ್ಳವ್ವನನ್ನು ತಂದಾದ ಮೇಲೆ ನೆಲವನ್ನು ಸಾರಿಸಿ ರಂಗೋಲಿ ವಗೈರೆ ಹಾಕಿ ಸಂಜೆಗೆ ಗುಳ್ಳವ್ವನ ಮೂರ್ತಿಶಿಲ್ಪವನ್ನು ಸಡಗರ ಸಂಭ್ರಮಗಳಿಂದ ಇಡುವುದು ನಡೆಯುತ್ತದೆ. ಮಣ್ಣಿನಲ್ಲಿ ಗುಳ್ಳವ್ವನ ಮಂಟಪದ ಬಾಗಿಲಿನ ವಿನ್ಯಾಸ ಮಾಡುತ್ತಾರೆ ಇನ್ನೂ ಕೆಲವರು ಕಟ್ಟಿಗೆಯಲ್ಲಿ ಮೊದಲೇ ಈ ವಿನ್ಯಾಸಗಳನ್ನು ಸಿದ್ಧಪಡಿಸಿಕೊಂಡಿರುತ್ತಾರೆ. ಪ್ರಾದೇಶಿಕವಾಗಿ ಇವುಗಳಲ್ಲಿ ವ್ಯತ್ಯಾಸ ವೈವಿಧ್ಯತೆಗಳಿವೆ. ಕೆಲವು ಭಾಗದಲ್ಲಿ ನಾಲ್ಕು ಕಂಭಗಳನ್ನಿಟ್ಟು ಬಾಗಿಲಿನ ಆಕೃತಿ ಮಾಡುತ್ತಾರೆ. ಇದರ ನಡುವೆ ಗುಳ್ಳವ್ವನ ಕೂಡಿಸಲಿಕ್ಕೆ ಕಟ್ಟಿಗೆಯ ಸುಂದರವಾದ ಸುಳುವುಗಳಿಂದ ಅಲಂಕೃತವಾದ ಚೌಕಟ್ಟುಗಳನ್ನು ಬಳಸುತ್ತಾರೆ. ಹೀಗೆ ಗುಳ್ಳವ್ವನ ಮೂರ್ತಿಶಿಲ್ಪ ಈ ಸುಂದರವಾದ ವಿವಿಧ ಪಕ್ಷಿಗಳ ಆಕಾರದ ಹೂ ಬಳ್ಳಿಗಳ ಸುಳುವುಗಳು ಮಂಟಪದಲ್ಲಿ ರಚನೆಗೊಂಡಿರುತ್ತವೆ.

ಮೊದಲನೆಯವಾರ ಒಂದೆತ್ತರವಾದರೆ ಎರಡನೆಯವಾರ ಎರಡೆತ್ತರ ಮೂರನೆಯ ವಾರ ಮೂರೆತ್ತರ ಹೀಗೆ ಎಷ್ಟು ಮಂಗಳವಾರ ಆ ತಿಂಗಳಲ್ಲಿ ಬರುತ್ತವೆಯೋ ಅಷ್ಟು ವಾರಗಳ ಈ ವಾಸ್ತುವಿನ್ಯಾಸಗಳು ಬಾಗಿಲಿನ ಮೇಲೆ ಬಾಗಿಲು ಕೂಡಿಸುತ್ತ ಎತ್ತರಿಸುತ್ತ ಹೋಗುತ್ತಾರೆ. ಮೇಲೆ ಮೇಲೆ ಹೋದಂತೆ ಈ ಬಾಗಿಲುಗಳು ಸಂಖ್ಯೆ ಕಡಿಮೆಯಾಗುತ್ತ ಹೋಗಿ ಕೊನೆಗೆ ಗುಳ್ಳವ್ವನ ವಾಸ್ತುಶಿಲ್ಪದ ವಿನ್ಯಾಸದ ಮಂಟಪ ಒಂದು ಗುಡಿಯ ಗೋಪುರದಂತೆ ರಚನೆಗೊಳ್ಳುತ್ತದೆ.

ಮೊದಲನೆಯ ಮಂಗಳವಾರ ಒಂದೆತ್ತರದ ವಿನ್ಯಾಸದಲ್ಲಿ ಲಿಂಗುವನ್ನು ಎರಡನೆಯ ಮಂಗಳವಾರ ನವಿಲನ್ನು ಮೂರನೆಯ ವಾರ ನಂದಿಯನ್ನೂ ನಾಲ್ಕನೆಯವಾರ ಬಾರಂಗ ಭಾವಿಯನ್ನು ಐದನೆಯ ಮಂಗಳವಾರ ಕುಂಬಾರ ಮನೆಯ ತಿಗರಿಯಿಂದ ತಯಾರಾದ ತಿಗರಿಯ ಗುಳ್ಳವ್ವನನ್ನು ಮಾಡಿಟ್ಟು ಪೂಜಿಸುವ ಸಂಪ್ರದಾಯವಿದೆ. ಇವೆಲ್ಲ ಮಣ್ಣಿನಲ್ಲಿ ಆಯಾ ಹುಡುಗಿಯರ ಕಲಾವಂತಿಕೆಯಿಂದ ಕೂಡಿದವುಗಳಾಗಿರುತ್ತವೆ. ವೈವಿಧ್ಯಮಯವಾದ ವಾಸ್ತುಶಿಲ್ಪಗಳು ಇಲ್ಲಿ ಕಂಡುಬರುತ್ತವೆ.

ಗುಳ್ಳವ್ವನ ಮೂರ್ತಿಶಿಲ್ಪಕ್ಕೆ ಕುಸಬಿಯ ಬೀಜಗಳಿಂದ ಗುಲಗಂಜಿಗಳಿಂದ ಅಲಂಕಾರ ಮಾಡುತ್ತಾರೆ. ಬಿಳಿಯ ಕುಸಬಿ ಬೀಜಗಳು ಕೆಂಪುಬಣ್ಣದ ಗುಲಗಂಜಿ ಬೀಜಗಳು ಅಲ್ಲಲ್ಲಿ ಗುಳ್ಳವನಿಗೆ ಹಸಿಮಣ್ಣಿನಲ್ಲಿ ಒತ್ತಿ ಇಟ್ಟು ತುಂಬ ಕಲಾತ್ಮಕವಾಗಿ ವಿನ್ಯಾಸಗೊಳಿಸಿರುತ್ತಾರೆ. ಅಲ್ಲದೆ ಬಣ್ಣ ಬಣ್ಣದ ಕಾಗದಗಳಿಂದ ವಿವಿಧ ರೀತಿಯ ಹೂಗಳನ್ನು ನಕ್ಷೆಗಳನ್ನು ಕತ್ತರಿಸಿ (ಅಲಂಕಾರ) ಮಾಡುವುದುಂಟು. ಮುತ್ತು ಹವಳ ಹಾಗೂ ಹೆಣಿಗೆ ಕಸೂತಿಯ ವಸ್ತ್ರಗಳು ವಿವಿಧ ರೀತಿಯ ಗೊಂಬೆಗಳು ಈ ಸಂದರ್ಭದಲ್ಲಿ ಅಲಂಕಾರಕ್ಕಾಗಿ ಇಡುತ್ತಾರೆ. ಹುಡುಗಿಯರು ತಮ್ಮ ಕಲಾತ್ಮಕತೆಯನ್ನು ಪ್ರದರ್ಶಿಸಲು ಇದೊಂದು ಉತ್ತಮ ಸಂದರ್ಭವಾಗಿದೆ. ಗುಳ್ಳವ್ವನ ಆಚರಣೆಗಾಗಿ ಕಸೂತಿಯ ಹೆಣಿಗೆಯ ವಿನ್ಯಾಸಗಳು ತಿಂಗಳುಗಳಷ್ಟು ಮೊದಲಿನಿಂದಲೂ ಪ್ರಾರಂಭವಾಗಿರುತ್ತದೆ.

ಹೀಗೆ ಅಲಂಕರಣಗೊಂಡ ಗುಳ್ಳವ್ವನ ಮೂರ್ತಿಶಿಲ್ಪದ ಮುಂದೆ ಇನ್ನೊಂದು 'ಗೊಗ್ಗವ್ವ' ಎಂಬ ಹೆಣ್ಣಿನಾಕಾರದ ಮೂರ್ತಿಯನ್ನು ನಿಲ್ಲಿಸಿರುತ್ತಾರೆ. ಇದು ಕಟ್ಟಿಗೆಯಿಂದ ಕೂಡಿದ್ದು ಇನ್ನು ಕೆಲವು ಸಲ ಮಣ್ಣಿನಿಂದಲೂ ಮಾಡಿರುತ್ತಾರೆ. ಶಿಲ್ಪವು ನೋಡಲು ವಿಕಾರ ಸ್ವರೂಪದಲ್ಲಿದ್ದು ಇದೊಂದು ವಿದೂಷಕ ಶಿಲ್ಪವಾಗಿದೆ. ಇದನ್ನು ದೀಪದ ಗೊಗ್ಗವ್ವನೆಂದು ಕರೆಯುತ್ತಾರೆ. ಮೊದಲು ಇದೊಂದು ದೀಪಸ್ಥಂಭವಿದ್ದು ನಂತರ ಇದು ಗೊಂಬೆಯ ಆಕಾರ ಪಡೆದಿರುವುದಾಗಿ ಹೇಳುತ್ತಾರೆ. 'ಗುಳ್ಳವ್ವನ ಮುಂದೆ ಗೊಗ್ಗವ್ವ ನಿಂತಂಗ' ಎಂಬ ಗಾದೆಯೂ ಇದೆ. ಕೆಲವು ಭಾಗದಲ್ಲಿ ಗುಳ್ಳವ್ವನ ಶಿಲ್ಪದ ಮುಂದೆ 'ಅಜ್ಜಯ್ಯ', 'ಕಾಳೀಸಿಂಗ್ಯಾ' 'ರಾಕ್ಷಸ' ಮುಂತಾದ ಇನ್ನೂ ಹಲವಾರು ಕಲ್ಪನಾತ್ಮಕವಾದ ಮೂರ್ತಿಶಿಲ್ಪಗಳು ಮಣ್ಣಿನಿಂದ ರಚನೆಯಾಗುತ್ತವೆ. ಇವೆಲ್ಲ 'ಗುಳ್ಳವ್ವ' 'ಗೊಗ್ಗವ್ವರ' ಮೂರ್ತಿಶಿಲ್ಪದ ಮುಂದೆ ಇಟ್ಟಿರುತ್ತಾರೆ. ಕೆಲವು ಭಾಗದಲ್ಲಿ ಮಣ್ಣಿನ ದೊಡ್ಡದಾದ ಕೋಣದ ಶಿಲ್ಪವನ್ನು ಮಾಡಿ ಮುಂದೆ ನಿಲ್ಲಿಸಿರುತ್ತಾರೆ. ಅಂದು ಮಧ್ಯ ರಾತ್ರಿ ಈ ಕೋಣದ ಬಲಿ ಕೊಡುವ ಕಾರ್ಯಕ್ರಮವು ಇರುತ್ತದೆ. ಇಲ್ಲಿ ಗುಳ್ಳವ್ವನಿಗೆ ಕೋಣದ ಬಲಿ ಕೊಡುವ ಸಂಪ್ರದಾಯವನ್ನು ಈ ಶಿಲ್ಪಗಳು ಪ್ರತಿನಿಧಿಸುತ್ತಿರಬಹುದು.

ಪ್ರತಿಮಂಗಳವಾರ ವಿಶೇಷ ಪೂಜೆಯಾದರೆ ದಿನಾಲು ಬಾಲಕಿಯರು ಮನೆ ಮನೆಗೆ ಗುಳ್ಳವ್ವನ ನೋಡಲು ಹೋಗುತ್ತಾರೆ. ರಾತ್ರಿ ಹಾಡು ಹೇಳುವ ಆರತಿ ಮಾಡುವ ಮತ್ತು ಬಂದವರಿಗೆ ಅರಲಿನ ಖಣ ಹಣ್ಣುಗಳಿಂದ ಉಡಿ ತುಂಬುವ ಪದ್ಧತಿಯೂ ನಡೆಯುತ್ತದೆ. ಇಲ್ಲಿ ಹಿರಿಯರು ಮಾಡುವ ಆಚರಣೆಯ ಪ್ರತಿರೂಪವಿರುವುದನ್ನು ಕಾಣಬಹುದು.

### ೫.೩. ಗುಳ್ಳವ್ವನ ಆಚರಣೆಯ ಶಿಲ್ಪಗಳ ವಿಸರ್ಜನೆ

ಒಂದು ತಿಂಗಳುದ್ದಕ್ಕೂ ನಡೆದ ಗುಳ್ಳವ್ವನ ಶಿಲ್ಪದ ಆಚರಣೆಯಲ್ಲಿ ಮೊದಲ ಪ್ರಾಶಸ್ತ್ಯ ಗುಳ್ಳವನಿಗೆ. ಇನ್ನುಳಿದ ಶಿಲ್ಪಗಳೆಲ್ಲ ವಿರೂಪವಾಗಿ ರಚನೆಗೊಂಡಿದ್ದು ಅವು ಗುಳ್ಳವ್ವ ಶಿಲ್ಪಕ್ಕೆ ದೃಷ್ಟಿಯಾಗದಿರಲೆಂದು ರಚನೆಯಾದ ಶಿಲ್ಪಗಳೆಂದು ಹೇಳಬಹುದು. ಗುಳ್ಳವ್ವ ಶಿಲ್ಪದ ವಿಸರ್ಜನೆಯೂ ತಿಂಗಳ ಕೊನೆಯ ಮಂಗಳವಾರ ಅಥವಾ ಬುಧವಾರ ನಡೆಯುತ್ತದೆ. ಅಂದು ಹಬ್ಬದ ನೈವೇದ್ಯಯಾಗುತ್ತದೆ. ಎಲ್ಲರೂ ಮೊದಲೇ ನಿರ್ಧರಿಸಿದಂತೆ ನದಿ, ಹಳ್ಳ, ಕೆರೆ ಭಾವಿ ಇಲ್ಲವೆ ಜಲಾಶಯಗಳ ಹತ್ತಿರಕ್ಕೆ ಗುಳ್ಳವ್ವ ಮತ್ತು ಉಳಿದ ಮೂರ್ತಿಶಿಲ್ಪಗಳನ್ನು ಮೆರವಣಿಗೆಯಲ್ಲಿ ಹಾಡುತ್ತ ತಂದು ಅಲ್ಲಿ ಮತ್ತೆ ಪೂಜಿಸಿ, ಹುಡುಗಿಯರು ಎರಡು ಗುಂಪುಗಳಾಗಿ ಮದುವೆಯ ಆಟದ ಎಲ್ಲ ಕಾರ್ಯಕ್ರಮ ಮಾಡುತ್ತಾರೆ. ನಂತರ ಊಟ ಮಾಡಿ ಗುಳ್ಳವ್ವನ ಶಿಲ್ಪವನ್ನು ಮತ್ತೆ ಪೂಜಿಸಿ ಮಳೆ ಬರಲಿ ಎಂದು ಮುಳ್ಳು ಕಂಟಿಯಲ್ಲಿ ಮೂರ್ತಿಗೆ ಮುಳ್ಳು ಚುಚ್ಚಿ ಇಟ್ಟು ಎಲ್ಲ ಶಿಲ್ಪಗಳನ್ನು ಅಲ್ಲಿ ವಿಸರ್ಜನೆ ಮಾಡಿ ಬರುತ್ತಾರೆ. ಹೀಗೆ ಮುಳ್ಳು ಕಂಟಿಯಲ್ಲಿ ವಿಸರ್ಜನೆ ಮಾಡಿ ಬಂದರೆ ಮಳೆಯಾಗುತ್ತದೆ ಎಂಬ ನಂಬಿಗೆಗಳಿವೆ.

ಪ್ರತಿ ಊರಲ್ಲಿಯೂ ಮನೆ ಮನೆಗಳಲ್ಲಿ ಈ ಆಚರಣೆಯಿದೆ. ಗೋಕಾಕ ತಾಲೂಕಿನ 'ಕಣವಿ' ಎಂಬ ಊರಲ್ಲಿ ಮಾತ್ರ ಗುಳ್ಳವ್ವನ ಶಿಲ್ಪದ ಆಚರಣೆ ವಿಶಿಷ್ಟವಾಗಿ ಆಚರಿಸಲಾಗುತ್ತದೆ. ಅಲ್ಲಿ ಮಣ್ಣಿನ ಮೂರಾಳು ಎತ್ತರದ ಗುಳ್ಳವ್ವನ ಮೂರ್ತಿಶಿಲ್ಪವನ್ನು ಸಾಮೂಹಿಕವಾಗಿ ಮಾಡಿ ಸಾಮೂಹಿಕವಾಗಿಯೇ

ಈ ಹಬ್ಬವನ್ನು ಗಣೇಶ ಉತ್ಸವದ ಹಾಗೆ ಆಚರಿಸುತ್ತಾರೆ. ಒಟ್ಟಾರೆ ಉತ್ತರ ಕರ್ನಾಟಕದ ವೈಶಿಷ್ಟ್ಯಪೂರ್ಣ ಆಚರಣೆ ಇದಾಗಿದೆ. ಈ ಆಚರಣೆಯ ಕುರಿತು ವಿಪುಲವಾಗಿ ಹಾಡುಗಳು ಸಿಗುತ್ತವೆ. ಅವುಗಳ ಕುರಿತು ಅಧ್ಯಯನ ನಡೆಯಬೇಕಾಗಿದೆ.

## ೬. ಶಿರಿಯಾಳ ಚೆಂಗಳೆ ಮೂರ್ತಿಶಿಲ್ಪದ ಆಚರಣೆ

ಹನ್ನೆರಡನೆಯ ಶತಮಾನದ ಮಹಾಶಿವಶರಣ ಶಿರಿಯಾಳ ಶೆಟ್ಟಿಯ ಮತ್ತು ತನ್ನ ಭಕ್ತಿ ಪರಾಕಾಷ್ಟೆಯಿಂದ ಶಿವನನ್ನು ಸಾಕ್ಷಾತ್ಕರಿಸಿಕೊಂಡ ಭಕ್ತ ಶಿರೋಮಣಿ ಚಂಗಳೆ ಇವರ ಸ್ಮರಣೆಯಲ್ಲಿ ಜನಪದರು ಶ್ರಾವಣ ಮಾಸದಲ್ಲಿ ಸಿರಿಯಾಳ ಚಂಗಳೆಯರ ಮೂರ್ತಿಶಿಲ್ಪವನ್ನು ರಚಿಸಿ ಪೂಜೆ ಸಲ್ಲಿಸುವ ಆಚರಣೆಯೂ ನಡೆಯುತ್ತಧೆ.

### ೬.೧. ಶಿರಿಯಾಳ ಚಂಗಳೆಯರ ಮೂರ್ತಿಶಿಲ್ಪದ ರಚನೆ

ಶಿರಿಯಾಳ ಚಂಗಳೆಯರ ಈ ಆಚರಣೆಯೂ ಕೆಲವು ಕಡೆಗೆ ಶಿರಿಯಾಳ ಶೆಟ್ಟಿಯನ್ನಿಟ್ಟು ಪೂಜಿಸುವುದೆಂದೂ, ಇನ್ನೂ ಕೆಲವು ಭಾಗದಲ್ಲಿ ಚಂಗಳೆವ್ವನ ಮೂರ್ತಿಶಿಲ್ಪದ ಪೂಜೆಯೆಂದೂ ಕರೆದರೆ ಮಹಾರಾಷ್ಟ್ರದಲ್ಲಿ ಅದರಲ್ಲೂ ಪುಣೆಯ ಭಾಗದಲ್ಲಿ 'ಶಿರಾಳ ಸೇಟ'ನ ಆಚರಣೆ ಎಂದು ಕರೆಯುತ್ತಾರೆ. ಶಿರಿಯಾಳ ಹಾಗೂ ಚಂಗಳೆಯರ ಈ ಭಕ್ತದಂಪತಿಗಳ ಮೂರ್ತಿರಚನೆಯೂ ಮಣ್ಣಿನಿಂದ ಕುಂಬಾರರು ಇಲ್ಲವೆ ಮೂರ್ತಿಮಾಡಲು ಅಲ್ಪಸ್ವಲ್ಪ ತಿಳುವಳಿಕೆಯುಳ್ಳವರಿಂದ ಮಾಡಿಸುತ್ತಾರೆ. ಇನ್ನೂ ಕೆಲವು ಸಲ ಮನೆಯ ಹಿರಿಯ ಅಜ್ಜಿಯರು ತಾವೇ ಮಣ್ಣಿನಿಂದ ಕಲಾತ್ಮಕವಾಗಿ ಗಂಡು ಹಾಗೂ ಹೆಣ್ಣಿನ ಆಕಾರದ ಕುಳಿತಿರುವ ಭಂಗಿಯ ಮೂರ್ತಿಶಿಲ್ಪಗಳನ್ನು ಮಾಡುತ್ತಾರೆ. ಇವೆರಡು ಶಿಲ್ಪಗಳನ್ನು ನೋಡಿದಾಗ ಶಿರಿಯಾಳನ ಶಿಲ್ಪವು ಸ್ವಲ್ಪ ಒರಟಾಗಿಯೂ ಚಂಗಳೆಯ ಶಿಲ್ಪವು ತುಂಬ ನಯವಾಗಿ ಸುಂದರವಾಗಿ ತಿದ್ದಿ ತಿದ್ದಿ ವಿನ್ಯಾಸಗೊಳಿಸಿ ರಚನೆ ಮಾಡಿರುತ್ತಾರೆ. ಸ್ಥಳೀಯ ಬಣ್ಣಗಳಿಂದ ಬಣ್ಣ ಹಚ್ಚಿ ಸುಂದರವಾಗಿ ಮೂರ್ತಿಗಳನ್ನು ವಿನ್ಯಾಸಗೊಳಿಸುವುದು ಉಂಟು. ಶಿರಿಯಾಳ ಶೆಟ್ಟಿಯ ಶಿಲ್ಪವು ಪುರುಷ ರೂಪದಲ್ಲಿ ಪೇಟಾ, ನಿಲುವಂಗಿಯನ್ನು ಹೊಂದಿದ್ದರೆ ಚಂಗಳೆಯ ಶಿಲ್ಪವು ದುಂಡಾದ ಆಕರ್ಷಕ ಮುಖವನ್ನು ಹೊಂದಿ ಸ್ತ್ರೀ ವೇಷಭೂಷಣದಿಂದ ಅಲಂಕೃತಗೊಂಡಿರುತ್ತದೆ. ಚಂಗಳೆಯ ಶಿಲ್ಪವು ಹೆಚ್ಚು ಕಲಾತ್ಮಕವಾಗಿ ಆಚರಣೆಗೊಳ್ಳಲು ಜನಪದರು ಕಥೆಯೊಂದನ್ನು ಹೇಳುತ್ತಾರೆ. "ಶಿರಿಯಾಳನ ಹೆಂಡತಿ ಮಹಾಭಕ್ತಿವಂತೆ ದೇವರು ಅವಳ ಭಕ್ತಿಯ ಪರೀಕ್ಷೆಗೆ ಬರುತ್ತಾನೆ. ಒಬ್ಬನೆ ಗಂಡುಮಗನನ್ನು ಪಡೆದ ಚಂಗಳೆಯಿಂದ ಶಿವನು ಆ ಮಗನನ್ನೇ ಅಡಿಗೆ ಮಾಡಿ ಊಟಕ್ಕೆ ಬಡಿಸಲು ಹೇಳುತ್ತಾನೆ. ಚಂಗಳೆ ಇದು ದೇವರ ಪರೀಕ್ಷೆಯೆಂದು ಮಗನನ್ನು ಕೊಂದು ಅಡಿಗೆ ಮಾಡಿ ಶಿವನಿಗೆ ಉಣಬಡಿಸುತ್ತಾಳೆ. ದೇವರು ಆಕೆಯ ಭಕ್ತಿಗೆ ಮೆಚ್ಚಿ ಪುನಃ ಮಗನನ್ನು ಬದುಕಿಸಿ ಆಕೆಗೆ ಸ್ವರ್ಗಕ್ಕೆ ಬರಲು ಹೇಳಿ ಹೋಗುತ್ತಾನೆ. ಮುಂದೆ ಒಂದು ದಿನ ಚಂಗಳೆ ಶಿವನಲ್ಲಿಗೆ ಸ್ವರ್ಗಕ್ಕೆ ಬರುತ್ತಾಳೆ. ಬಾಗಿಲಲ್ಲಿ ಶಿವನ ದೂತರು ಅವಳನ್ನು ಒಳಗೆ ಬಿಡುವುದಿಲ್ಲ. ಕೋಪಿತಳಾಗಿ ಚಂಗಳೆ ಶಿವನನ್ನು ನಿಂದಿಸುತ್ತಾಳೆ. ಈ ವಿಷಯ ತಿಳಿದ ಶಿವನು ಸಿಟ್ಟಿಗೆದ್ದು ಚಂಗಳೆಗೆ ಶಾಪಕೊಡುತ್ತಾನೆ. ಚಂಗಳೆಗೆ ತಪ್ಪಿನ ಅರಿವಾಗಿ ಶಿವನಿಗೆ ಪರಿಪರಿಯಾಗಿ ಕೇಳಿಕೊಳ್ಳಲು ಶಿವನು ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ಭೂಲೋಕದಲ್ಲಿಯೇ ನಿನ್ನ ಹೆಸರು ಉಳಿಯುತ್ತದೆ. ನಿನ್ನ ಸುಂದರವಾದ ಮೂರ್ತಿಯನ್ನು ಚಿತ್ರವನ್ನು ಪೂಜಿಸಿದವರಿಗೆ ಅವರ ಇಷ್ಟಾರ್ಥಗಳು

ಈಡೇರುತ್ತವೆ ಎಂದನಂತೆ. ಆ ಪ್ರಕಾರವಾಗಿ ಸ್ತ್ರೀಯರು ಹೆಚ್ಚಾಗಿ ಶಿರಿಯಾಳ ಚಂಗಳೆಯರ ಮೂರ್ತಿಶಿಲ್ಪಗಳನ್ನು ಮಾಡಿ ಪೂಜಿಸುವ ಸಂಪ್ರದಾಯ ಬಂದಿರುವುದಾಗಿ ಹೇಳುತ್ತಾರೆ. ಅದಕ್ಕಾಗಿಯೇ ಶಿರಿಯಾಳ ಶೆಟ್ಟಿಗಿಂತ ಚಂಗಳೆಯ ಮೂರ್ತಿಯನ್ನು ಸುಂದರವಾಗಿ ಮಾಡಿ ಪೂಜಿಸುವುದು ಎಂದು ಈ ಕಥೆಯೊಂದನ್ನು ಹೇಳುತ್ತಾರೆ.

ಇನ್ನು ಕೆಲವು ಭಾಗದಲ್ಲಿ ಶಿರಿಯಾಳ ಶೆಟ್ಟಿಯನ್ನು ಚಂಗಳೆಯನ್ನು ಮತ್ತು ಐದು ಮಕ್ಕಳ ಶಿಲ್ಪಗಳನ್ನು ಮಾಡಿ ಬುಟ್ಟಿಯಲ್ಲಿಟ್ಟು ಪೂಜಿಸುವ ಸಂಪ್ರದಾಯವು ಇದೆ. ಇದರಿಂದ ಸಂತಾನಪ್ರಾಪ್ತಿ, ಸೌಭಾಗ್ಯ, ಮುತ್ತೈದೆತನ ಲಭಿಸುತ್ತದೆ ಎಂಬ ನಂಬಿಕೆಗಳು ಇವೆ. ಈ ಮೂರ್ತಿಶಿಲ್ಪವನ್ನು ಮರುದಿವಸ ವಿಸರ್ಜಿಸುತ್ತಾರೆ. ಇನ್ನು ಕೆಲವರು ಕಟ್ಟಿಗೆಯಿಂದ ಈ ಶಿಲ್ಪಗಳನ್ನು ಮಾಡಿಸಿಟ್ಟಿರುತ್ತಾರೆ. ಪ್ರತಿವರ್ಷ ಪೂಜೆಯಾದ ಮೇಲೆ ಮತ್ತೆ ಮನೆಯಲ್ಲಿ ಪೆಟ್ಟಿಗೆಯೊಂದರಲ್ಲಿ ಹಾಕಿ ಇಡುತ್ತಾರೆ. ಹೆಚ್ಚಾಗಿ ಮಣ್ಣಿನ ಶಿಲ್ಪಗಳನ್ನು ಪೂಜಿಸುವ ಸಂಪ್ರದಾಯವು ಎಲ್ಲ ಕಡೆಗೂ ಉಳಿದು ಬಂದಿದೆ.

## ೭. ಗಣೇಶನ ಶಿಲ್ಪದ ಆಚರಣೆ

ಗಣೇಶ ಹಳ್ಳಿಗಳಲ್ಲಿ ಬೆನಕನೆಂದೇ ಹೆಚ್ಚು ಪ್ರಸಿದ್ಧನಾಗಿದ್ದಾನೆ. ಶ್ರಾವಣ ಮಾಸದ ನಂತರ ಭಾದ್ರಪದ ಮಾಸದಲ್ಲಿ ಬರುವ ಒಂದು ದೊಡ್ಡ ಜನಪದ ಸಂಪ್ರದಾಯವಿದಾಗಿದೆ. ಈ ಸಂಪ್ರದಾಯದ ಆಚರಣೆ ಜನಪದಕ್ಕೆ ಮಾತ್ರ ಸೀಮಿತವಾಗದೇ ಶಿಷ್ಟ ಸಂಸ್ಕೃತಿಗೂ ವ್ಯಾಪಕವಾಗಿ ಹರಡಿನಿಂತಿರುವುದನ್ನು ಕಾಣಬಹುದು.

### ೭.೧. ಗಣೇಶ ಮೂರ್ತಿಶಿಲ್ಪದ ರಚನಾ ವಿನ್ಯಾಸ

ಹಳ್ಳಿಗಳಲ್ಲಿ ಸೆಗಣಿಯಿಂದ ಬೆನಕನನ್ನು ಮಾಡುತ್ತಿದ್ದುದಾಗಿ ತಿಳಿದು ಬರುತ್ತದೆ. ಮುಂದೆ ಆ ಸೆಗಣಿಯ ಬದಲಾಗಿ ಮಣ್ಣಿನ ಬಳಕೆಯಾಗುತ್ತ ಬಂದಿದೆ. ಕರ್ನಾಟಕದಲ್ಲಿ ಈ ಸಂಪ್ರದಾಯ ಮೊದಲು ಮಹಾರಾಷ್ಟ್ರದಿಂದ ಬಂದುದಾಗಿ ಹೇಳಲಾಗುತ್ತಿದ್ದು ಈ ಆಚರಣೆಯಲ್ಲಿ ಈಗ ಮಣ್ಣಿನಿಂದಲೇ ಗಣೇಶನನ್ನು ಮಾಡುತ್ತಾರೆ. ಹಬ್ಬಕ್ಕೆ ಪೂರ್ವದಲ್ಲಿಯೇ ಮಣ್ಣನ್ನು ತಂದು ಸಂಗ್ರಹಿಸಿ ಅದನ್ನು ನೆನೆಹಾಕಿ ಜಿಗುಟು ಮಾಡುತ್ತಾರೆ. ಹಳ್ಳಿಗಳಲ್ಲಿ ಹಬ್ಬದ ಹಿಂದಿನ ದಿವಸ ರಾತ್ರಿಯುದ್ದಕ್ಕೂ ಈ ಬೆನಕನನ್ನು ಮಾಡಿ ಹಬ್ಬದ ದಿನ ಅಲಂಕಾರ ಮಾಡಿ ಕೊಡುವ ಸಂಪ್ರದಾಯವಿದೆ. ಪತ್ತಾರರು, ಜಿನಗಾರರು; ಬಡಿಗರು, ಕುಂಬಾರರು, ಮೊದಲು ಈ ಮೂರ್ತಿಶಿಲ್ಪವನ್ನು ಮಾಡಿ ಊರಲ್ಲಿ ಕೊಟ್ಟು ಅದಕ್ಕೆ ಪ್ರತಿಯಾಗಿ ಬ್ಯಾಜವನ್ನು ಪಡೆಯುವ ಸಂಪ್ರದಾಯವಿತ್ತು. ಈಗ ಯಾರು ಬೇಕಾದರೂ ಈ ಶಿಲ್ಪವನ್ನು ಮಾಡುತ್ತಿದ್ದು ಗಣೇಶನ ಶಿಲ್ಪವು ಶಿಷ್ಟ ಸಂಸ್ಕೃತಿಗೆ ತಿರುಗಿರುವುದು ಕಂಡುಬರುತ್ತದೆ. ಮೊದಲು ಜನಪದರ ಗಣೇಶನ ಶಿಲ್ಪ ಜನಪದ ವೈಲಕ್ಷಣಗಳನ್ನು ಹೊತ್ತು ಬರುತ್ತಿದ್ದರೆ ಇಂದು ಶಾಸ್ತ್ರೋಕ್ತವಾದ ಪ್ರಮಾಣ ಬದ್ಧತೆಗೆ ಬದ್ಧವಾದ ವರ್ಣಗಾರಿಕೆಯಿಂದ ಕೂಡಿದ ಶಿಲ್ಪವನ್ನು ರಚಿಸಲಾಗುತ್ತದೆ. ಈ ಶಿಲ್ಪದ ರಚನೆ ಆದಷ್ಟು ಸ್ವತಂತ್ರವಾಗುತ್ತ ಬಂದಿರುವುದನ್ನು ಜನಪದ ವಿಧಿಕ್ರಿಯೆಯ ರೀತಿ ನೀತಿ ರಚನಾವಿನ್ಯಾಸಗಳೆಲ್ಲ ಶಿಷ್ಟದತ್ತ ವಾಲಿವೆ. ಜೋಕುಮಾರ ಹಳ್ಳಿಗರಲ್ಲಿ ಗಣೇಶನಕ್ಕಿಂತ ಹೆಚ್ಚು ಹತ್ತಿರದ ದೇವತೆಯಾಗಲು ಕಾರಣ ಆತ ಇನ್ನೂ ಜನಪದ ದೇವತೆಯಾಗಿ ಉಳಿದಿರುವುದೇ ಕಾರಣವೆನ್ನಬಹುದು.

ಗಣೇಶ ಒಕ್ಕಲಿಗರಲ್ಲಿ ಸುಗ್ಗಿಯ ಕಣದಲ್ಲಿ ಪೂಜಿಸಲ್ಪಡುವುದಿಲ್ಲ. ಮೇಲಾಗಿ ಗಣೇಶನ ಪೂಜೆಯು ಭಾದ್ರಪದ ಮಾಸದಲ್ಲಿ ಬಂದರೂ ಮಣ್ಣಿನ ಪೂಜೆಯೆಂದು ಅವನು ಪರಿಗಣಿಸುವುದಿಲ್ಲ. ಹೀಗಿದ್ದರೂ ಗಣೇಶ ಸರ್ವಸಂಕಷ್ಟಗಳ ನಿವಾರಕನೆಂಬ ಭಾವನೆ ಜನಜನಿತವಿದೆ.

ಭಾದ್ರಪದ ಶುದ್ಧ ಚತುರ್ಥಿಗೆ ಬಂದ ಗಣೇಶಶಿಲ್ಪದ ಆಚರಣೆ ಐದುದಿನಗಳವರೆಗೆ ವಿಜೃಂಭಣೆಯ ಅಲಂಕಾರ ವೈಶಿಷ್ಟ್ಯದಿಂದ ಪೂಜೆಗೊಂಡು ಅಷ್ಟಮಿಯ ದಿವಸ ವಿಸರ್ಜನೆಯಾಗುವ ದೇವತೆಯಾಗಿದ್ದಾನೆ. ಈತನ ಕುರಿತ ಅನೇಕ ಕಥೆ ಹಾಡುಗಳಿದ್ದು ಈಗ ಗಣೇಶ ಶಿಷ್ಟದೇವತೆಯಾಗಿಯೇ ಹೆಚ್ಚು ನಮಗೆ ಕಂಡುಬರುತ್ತಾನೆ.

ಗಣೇಶನ ಶಿಲ್ಪದ ಆಚರಣೆ ವಿಶ್ವವ್ಯಾಪಿಯಾಗಿ ಇಂದು ಕಂಡುಬರುತ್ತಿದ್ದು ಮಣ್ಣಿನ ಗಣೇಶನನ್ನು ಮಾಡಿ ಪೂಜಿಸುವ ಸಂಪ್ರದಾಯವೇ ವಿಶೇಷವಾಗಿ ಕಂಡುಬರುತ್ತಿದೆ. ಜನಪದರಲ್ಲಿ ಗಣೇಶನ ಮೂರ್ತಿಶಿಲ್ಪ ತುಂಬಾ ಸರಳ. ಯಾವುದೇ ರೀತಿಯ ವರ್ಣಗಾರಿಕೆ ವಿಪರೀತ ಅಲಂಕಾರಿಕೆಗಳಿಲ್ಲದೆ ಪೂಜೆಗೊಳ್ಳುವ ಶಿಲ್ಪವಾಗಿದ್ದುದು ತಿಳಿದು ಬರುತ್ತದೆ.

"ಕರಕೀ ಪತ್ರೀ ಕಣಗಿಲಹೂವು ಗಣನಾಥಾ।
ಎಳ್ಳ ಹೊಲದಾಗ ಡೊಳ್ಳು ಹೊಟ್ಟೆಯ ಬೆನಕ
ಎಳ್ಳಿನುಂಡಿಯ ಪನಿವಾರ। ತಂದಿನಿ
ಎಳ್ಳಷ್ಟು ಮತಿಯ ಕೊಡು ನನಗೆ"।

ಎಂಬಂತಹ ಹಳ್ಳಿಯ ಹಾಡುಗಳಲ್ಲಿ ಬೆನಕನ ನಿಸರ್ಗ ಸಹಜವಾದ ಆಚರಣೆ ಇರುವುದನ್ನು ಕಾಣಬಹುದು. ದೊಡ್ಡ ಹೊಟ್ಟೆ, ಉದ್ದವಾದ ಸೊಂಡಿಲು, ಆನೆಯ ಮುಖವಿನ್ಯಾಸದ ಗಣೇಶನ ಹತ್ತಿರ ಆತನ ವಾಹನ ಇಲಿಯೂ ಅವಶ್ಯಕವಾಗಿ ರಚನೆಗೊಂಡಿರುವುದು ವೈಶಿಷ್ಟ್ಯ. ಹಾಗೆಯೇ ಹೊಟ್ಟೆಗೆ ಸುತ್ತಿದ ಹಾವು ಇವೆಲ್ಲ ಗಣೇಶನ ಪೌರಾಣಿಕ ಕಥೆಯ ಹಿನ್ನೆಲೆಯಲ್ಲಿ ಶಿಲ್ಪವನ್ನು ರಚಿಸುವುದು ಹಿಂದಿನಿಂದ ನಡೆದು ಬಂದ ಸಂಪ್ರದಾಯವಾಗಿದೆ.

## ೮. ಜೋಕುಮಾರ ಶಿಲ್ಪದ ಆಚರಣೆ

ಭಾದ್ರಪದ ಮಾಸದಲ್ಲಿ ಸಪ್ಟಂಬರ್ ತಿಂಗಳಲ್ಲಿ ಜೋಕುಮಾರನ ಶಿಲ್ಪದ ಆಚರಣೆ ಬರುತ್ತದೆ. ಅಷ್ಟಮಿಯ ದಿವಸ ಅಷ್ಟಮಿಯ ಕೊಡದಲ್ಲಿ ಜೋಕುಮಾರ ಹುಟ್ಟಿಬರುತ್ತಾನೆ ಎಂಬುದು ಜನಪದರ ಭಾವನೆಯಾಗಿದೆ. ಈತ ವರ್ಷದಲ್ಲಿ ಒಂದು ವಾರ ಜನರಿಂದ ಪೂಜಿಸಿಕೊಳ್ಳುವ ಜನಪದ ದೇವತೆ. ಉತ್ತರ ಕರ್ನಾಟಕ ಮತ್ತು ಮಧ್ಯಕರ್ನಾಟಕಗಳಲ್ಲಿ ವಿಶೇಷವಾಗಿ ಜೋಕುಮಾರನ ಆಚರಣೆ ಕಂಡುಬರುತ್ತದೆ.

### ೮.೧. ಜೋಕುಮಾರನ ಶಿಲ್ಪದ ರಚನೆ

ಗಂಗಮತಸ್ಥರಾದ ಕಬ್ಬಲಿಗರು, ಅಂಬಿಗರು, ಸುಣಗಾರರು, ಅಗಸರು ಈ ಆಚರಣೆಯಲ್ಲಿ ಪ್ರಮುಖರಾಗಿ ಕಂಡುಬರುತ್ತಾರೆ. ಇವರು ಜೋಕುಮಾರನ ಮೂರ್ತಿಶಿಲ್ಪವನ್ನು ಮಣ್ಣಿನಿಂದ ರಚಿಸುತ್ತಾರೆ. ಮೊದಲು ಮಣ್ಣನ್ನು ತಂದು ನೆನೆಹಾಕಿ ನಂತರ ಅದನ್ನು ಕುಟ್ಟಿ ಹದಮಾಡಿಕೊಳ್ಳುತ್ತಾರೆ.

ಆದರಲ್ಲಿ ಅರಳಿ(ಹತ್ತಿ) ಬತ್ತದ ಹುಲ್ಲನ್ನು ಕೂಡಿಸಿ ಮಣ್ಣನ್ನು ಹದಮಾಡಿಕೊಂಡು ಜೋಕುಮಾರನ ಮೂರ್ತಿಶಿಲ್ಪ ತಯಾರಿಸಲಾಗುತ್ತದೆ. ಇವನ ಮೂರ್ತಿಯೂ ಕಲಾಪೂರ್ಣವಾಗಿದ್ದು ರಸಿಕತೆಯನ್ನು ಸೂಸುತ್ತದೆ. ಅಗಲವಾದ ಮುಖ ಅದಕ್ಕನುಗುಣವಾದ ಆಕರ್ಷಕ ಕಣ್ಣುಗಳು ತಲೆಯ ಮೇಲೆ ಕಿರೀಟದಂತಹ ತೊಡಗೆ (ರುಮಾಲು) ಕಲ್ಲಿ ಮೀಸೆಗಳಿಂದ ಅವನ ಸಿರಿವಂತಿಕೆಯನ್ನು ಹೆಚ್ಚಿಸಲಾಗುತ್ತದೆ. ದೊಡ್ಡದಾದ ಬಾಯಿ ಒಂದು ಕೈಯಲ್ಲಿ ಕತ್ತಿ, ಇನ್ನೊಂದು ಕೈಯಲ್ಲಿ ಅಂಬಲಿಯ ಬಟ್ಟಲು ದೊಡ್ಡದಾದ ಪುರುಷೇಂದ್ರಿಯವು ಅವನ ಕಾಮುಕತೆಯನ್ನು ತೋರಿಸುತ್ತದೆ. ಕುಳಿತ ಭಂಗಿಯ ಶಿಲ್ಪವನ್ನು ಸ್ತ್ರಿಯರೇ ಹೆಚ್ಚಾಗಿ ಮಾಡುತ್ತಾರೆ. ಕೆಲವು ಭಾಗದಲ್ಲಿ ಪುರುಷರು ರಚಿಸುವುದುಂಟು.

### ೮.೨. ಜೋಕುಮಾರ ಶಿಲ್ಪದ ಅಲಂಕಾರ

ಮಣ್ಣಿನಿಂದ ತಯಾರಿಸಿದ ಜೋಕುಮಾರನ ಶಿಲ್ಪಕ್ಕೆ ಸರಳವಾದ ಅಲಂಕಾರ ಮಾಡಲಾಗುತ್ತದೆ. ಹಣೆಗೆ ಎದ್ದು ಕಾಣಿಸುವಂತೆ ವಿಭೂತಿ ಬಳಿಯುತ್ತಾರೆ. ಮುಖದಲ್ಲಿ ಕುಂಕುಮ ಮತ್ತು ಬಾಯಿಯಲ್ಲಿ ಬೆಣ್ಣೆಯ ಮುದ್ದೆಯನ್ನು ಇಟ್ಟಿರುತ್ತಾರೆ. ಈ ಬೆಣ್ಣೆ ಬಿಸಿಲಿಗೆ ಕರಗದಂತೆ ಅದರ ಸುತ್ತಲು ಹಸಿಮಣ್ಣನ್ನು ಬೇವಿನ ತಪ್ಪಲನ್ನು ಹೊದಿಸಿರುತ್ತಾರೆ. ಹೊಸದಾದ ಬಿದಿರಿನ ಬುಟ್ಟಿಯಲ್ಲಿ ರಾಗಿ, ಜೋಳ, ಕೆಲವು ಭಾಗದಲ್ಲಿ ಅಕ್ಕಿ ಹಾಕಿರುತ್ತಾರೆ. ನಡುವೆ ಜೋಕುಮಾರನ ಮೂರ್ತಿಶಿಲ್ಪವನ್ನು ಇಟ್ಟು ಸುತ್ತಲೂ ಬೇವಿನಿಂದ ಅಲಂಕರಿಸಿರುತ್ತಾರೆ.

ಯಾಕೋ ಜೋಕುಮಾರ ನಿನ್ನ ಬಾಯಿಗೆ ಬೆಣ್ಣಿಲ್ಲ
ಮೇಲೆ ಮಾಣಿಕದ ಹರಳಿಲ್ಲ ಈ ವಾರ
ಓಣ್ಯಾಗ ನಿನ್ನ ಸುಳಿವಿಲ್ಲ.*

ಎಂಬ ಜನಪದ ಹಾಡಿನಲ್ಲಿ ಬಾಯಲ್ಲಿ ಬೆಣ್ಣೆ ಮತ್ತು ಹಣೆಯಲ್ಲಿ ಮಾಣಿಕದ ಹರಳು ಜೋಕುಮಾರನಿಗೆ ಇರುವುದನ್ನು ತಿಳಿಸುತ್ತದೆ.

### ೮.೩. ಏಳುದಿನದ ಆಚರಣೆ

ಜೋಕುಮಾರನ ಶಿಲ್ಪದ ಅಲಂಕಾರದೊಂದಿಗೆ ಏಳುದಿನಗಳು ಊರಲ್ಲಿ ಮನೆ ಮನೆಗೆ ಸಂಚಾರ ನಡೆಯುತ್ತದೆ. ಬುಟ್ಟಿಯಲ್ಲಿ ಜೋಕುಮಾರನನ್ನು ಕುಳ್ಳಿರಿಸಿಕೊಂಡು ಹೆಂಗಸರು ಮನೆಮನೆಗೆ ಹೋಗಿ ಹಾಡು ಹೇಳುತ್ತಾರೆ. ಜೋಕುಮಾರ ಬಂದಿದ್ದಾನೆ. ಬೆಣ್ಣೆ ಕಾಳು ಕಡಿ ಕೊಡಲು ಕೇಳಿಕೊಳ್ಳುತ್ತಾರೆ. ಜನ ಮನೆ ಮನೆಯಿಂದ ಕಾಳುಕಡಿ ರಾಗಿ, ಬತ್ತ, ಅಕ್ಕಿ ಅಲ್ಲದೆ ಮನೆಯಲ್ಲಿ ತಗಣೆ, ಉಣ್ಣೆ, ಚಿಕ್ಕಾಡ, ಗುಂಗಾಡ ಆಗದಿರಲೆಂದು, ಜೋಕುಮಾರನಿಗೆ ಉಪ್ಪು ಮೆಣಸಿನಕಾಯಿ, ಎಣ್ಣೆ ಬೆಣ್ಣೆ ಅಂಬಲಿಯನ್ನು ಕೊಡುತ್ತಾರೆ.

ಜೋಕುಮಾರನ ಹೊತ್ತು ತಂದ ಹೆಂಗಸರು ಪ್ರತಿಯಾಗಿ ಮನೆಯವರಿಗೆ ಪ್ರಸಾದವಾಗಿ ಅಂಬಲಿ(ಹುಳಿ ನುಚ್ಚು) ಮತ್ತು ಬೇವಿನ ತಪ್ಪಲಲ್ಲಿ ಸ್ವಲ್ಪ ಬೆಣ್ಣೆಯನ್ನು ಕೊಡುತ್ತಾರೆ. ಈ ಬೆಣ್ಣೆಯನ್ನು ಕಣ್ಣಿಗೆ ಹಚ್ಚಿಕೊಂಡರೆ ಕಣ್ಣುಬೇನೆ ಬರುವುದಿಲ್ಲವೆಂದು ನಂಬುತ್ತಾರೆ. ಹಾಗೆಯೇ ಅಂಬಲಿಯನ್ನು ಹೊಲದಲ್ಲಿ ಹೋಗಿ ಚರಗ ಚಲ್ಲಿ ಬರುತ್ತಾರೆ. ಇದರಿಂದ ಬೆಳಸು ಹೆಚ್ಚಾಗುವುದಾಗಿ ಭಾವಿಸುತ್ತಾರೆ.

ಈತನ ಹುಣ್ಣಿವೆಯನ್ನು 'ಬೆದಗಡಕ ಹುಣ್ಣಿವೆ' ಎಂದು ಕರೆಯುತ್ತಾರೆ. ಈ ಹುಣ್ಣಿವೆಯಲ್ಲಿ ಹುಟ್ಟಿದ ಹೆಣ್ಣುಗಳು ಗರತಿಯರಾಗುವುದಿಲ್ಲವೆಂಬ ನಂಬಿಗೆಯೂ ಇದೆ. ಗಣೇಶನಿಗೆ ಜೋಕುಮಾರನ ನೆರಳು ಬಿದ್ದರೆ ಗಣೇಶನ ಹೊಟ್ಟೆ ಒಡೆಯುತ್ತದೆ ಎಂದು ನಂಬಿಕೆಯಿದೆ. ಜೋಕುಮಾರ ಮನೆಗೆ ಬಂದಾಗ ಗಣಪತಿಯ ಮೇಲೆ ಅರಿವೆ ಹಾಕಿ ಮುಚ್ಚುತ್ತಾರೆ. ಈತನನ್ನು ಪೂಜಿಸುವುದರಿಂದ ಸಂತಾನಭಾಗ್ಯ ಲಭಿಸುವುದಾಗಿ ಹೇಳುತ್ತಾರೆ. ಹೀಗೆ ಅನೇಕ ನಂಬಿಕೆ ಆಶಯಗಳಿಂದ ಜೋಕುಮಾರ ಹಳ್ಳಿಗರಿಗೆ ತುಂಬ ಜನಪ್ರಿಯ ದೇವತೆಯಾಗಿದ್ದಾನೆ.

ಒಂದುವಾರ ಊರಲ್ಲೆಲ್ಲ ತಿರುಗಾಡಿ ದಿನಂಪ್ರತಿ ಪೂಜೆ ಸಲ್ಲಿಸಿಕೊಂಡ ಜೋಕುಮಾರನನ್ನು ಕೊನೆಯದಿನ ದಿನ ಮಾಡಿ ಹಬ್ಬವನ್ನು ಆಚರಿಸುತ್ತಾರೆ. ಈತ ಜನಪದರಲ್ಲಿ ಮಳೆ ತರಿಸುವ ಮತ್ತು ಸಮೃದ್ಧ ಬೆಳೆ ಬರಿಸುವ ಸಂತಾನಪ್ರಾಪ್ತಿ ಮಾಡುವ ದೇವತೆಯಾಗಿ ಆಚರಣೆಗೊಳ್ಳುತ್ತಾನೆ.

### ೮.೪. ಜೋಕುಮಾರ ಶಿಲ್ಪದ ಆಚರಣೆಯ ಹಿನ್ನೆಲೆ

ಯಾವುದೇ ಒಂದು ಆಚರಣೆಯ ಹಿಂದೆ, ಒಂದೊಂದು ಸಂಪ್ರದಾಯ ಬೆಳೆದು ಬಂದಿರುತ್ತದೆ. ಹಾಗೆಯೇ ಅದಕ್ಕೆ ಹಲವಾರು ಐತಿಹ್ಯಗಳು ಇರುತ್ತವೆ. ಜೋಕುಮಾರ ಶಿಲ್ಪದ ಆಚರಣೆಯೂ ಇದಕ್ಕೆ ಹೊರತಾಗಿಲ್ಲ. ಜೋಕುಮಾರನ ಕುರಿತು ಅನೇಕ ಕಥೆಗಳು ಕಂಡುಬರುತ್ತಿದ್ದು ಇಲ್ಲಿ ಮಾದರಿಗಾಗಿ ಒಂದೆರಡನ್ನು ಸ್ಥೂಲವಾಗಿ ಉದಾಹರಿಸಬಹುದಾಗಿದೆ.

ಜೋಕುಮಾರನು ಜೋಕಋಷಿ ಮತ್ತು ಎಳೇ ಗೌರಿಯರ ಮಗ (ಅನುಭವಶಿಖಾಮಣಿ'ಯ ಕಥೆಯಲ್ಲಿ 'ಜೋಕನು ಸಪ್ತರ್ಷಿಗಳ ಸೇವಕನೇ ಹೊರತು ಋಷಿಯಲ್ಲ. ಜನಪದ ಕಥೆಯ ಪ್ರಕಾರ ಜೋಕುಮಾರನ ತಾಯಿ ಎಳೇಗೌರಿ) ಅವರಿಗೆ ಬಹಳ ಕಾಲ ಮಕ್ಕಳಾಗಲಿಲ್ಲ. ಆ ಋಷಿಯೂ ಸಂತಾನಾಪೇಕ್ಷೆಯಿಂದ ಘೋರವಾದ ತಪಸ್ಸನ್ನು ಮಾಡಿ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡಾಗ ಶಿವನು ಅವರಿಗೆ ಏಳುದಿನಗಳ ಆಯುಸ್ಸುಳ್ಳ ಮಗನನ್ನು ಅನುಗ್ರಹಿಸಿದನು. ಹೀಗೆ ಹುಟ್ಟಿದ ಮಗುವೇ ಜೋಕುಮಾರ. ಹುಟ್ಟಿದ ಏಳು ದಿನಗಳೊಳಗೆ ಅವನು ಎಲ್ಲ ಪಟ್ಟಣಗಳನ್ನು ತಿರುಗಿದ. ರಾಜ್ಯವನ್ನು ಆಳಿದ; ಅವನು ಜನಗಳು ಕೇಳಿದ್ದನ್ನೆಲ್ಲ ದಯಪಾಲಿಸುತ್ತಾನೆ. ಸಂತಾನವಿಲ್ಲದವರಿಗೆ ಸಂತಾನವನ್ನು ಅನುಗ್ರಹಿಸುತ್ತಾನೆ. ಅವನು ಮಹಾಪುಂಡ, ಅನೇಕ ಸ್ತ್ರೀಯರ ಮಾನಭಂಗ ಮಾಡುತ್ತಾನೆ. ಕೊನೆಗೆ ಒಬ್ಬ ಮಡಿವಾಳನ ಮನೆಯಲ್ಲಿ ಒಬ್ಬ ಕನ್ಯೆಯ ಮಾನಭಂಗ ಮಾಡುತ್ತಾನೆ. ಅದು ತಿಳಿದು ಆ ಮನೆಯ ಯಜಮಾನ ಅವನ ಎದೆಗೆ ಕತ್ತಿಯಿಂದ ಚುಚ್ಚಿ ದೇಹವನ್ನು ಹೊಳೆಗೆ ಎಸೆಯುತ್ತಾನೆ. ಅಲ್ಲಿ ಅವನು ನರಳುತ್ತಿರುವಾಗ ಒಬ್ಬ ಬೆಸ್ತನ ಬಲೆಗೆ ಬೀಳುತ್ತಾನೆ. ಅದು ಏನೋ ಎಂತೋ ಎಂದು ಮತ್ತೆ ಹೊಳೆಗೆ ಎಸೆಯುತ್ತಾನೆ. ಜೋಕುಮಾರನ ದೇಹ ಒಂದು ಕಲ್ಲಿನ ಕೆಳಗೆ ಸಿಕ್ಕು ನರಳುತ್ತಿರುವಾಗ ಒಬ್ಬ ಅಗಸ ಅದನ್ನು ಮನೆಗೆ ಹೊತ್ತು ತರುತ್ತಾನೆ. ಅಲ್ಲಿ ಅವನ ಪ್ರಾಣ ಹಾರಿಹೋಗುತ್ತದೆ. ಅಂದಿನಿಂದ ಜೋಕುಮಾರನ ಹಬ್ಬ ಒಂದು ವಾರ ಆಚರಿಸುವ ಸಂಪ್ರದಾಯವು ರೂಢಿಗೆ ಬಂದಿತು.[೫]

ಇನ್ನೊಂದು ಕಥೆಯ ಪ್ರಕಾರ ಜೋಕುಮಾರನು ದಿಟ್ಟಾದೇವಿಯ ಮಗನು. ಹುಟ್ಟಿದ ಏಳು ದಿನಗಳಲ್ಲಿ ಘಟಿಂಗನಾಗಿ ಊರೆಲ್ಲ ಹಾಳುಮಾಡಿ ಹಳ್ಳದಲ್ಲಿರುವ ಅಗಸರ ಹುಡುಗಿಯರ ಬೆನ್ನು

---

೫. ಡಾ. ಎಂ. ಚಿದಾನಂದಮೂರ್ತಿ: ಗ್ರಾಮೀಣ, ಪು.೧೪೪

ಹತ್ತಲು ಇವನ ಪುಂಡಾಟಕ್ಕೆ ಊರು ಬೇಸತ್ತು ಹಿಂಡುಗಟ್ಟಿ ಕೂಡಿ, ಕಂಡ ಕಂಡಲ್ಲಿ ಕಲ್ಲಿಗೆ ಬಡಿದು ರಾತ್ರಿಯಲ್ಲಿ ಅಗಸರ ಕಲ್ಲಲ್ಲಿ ಇಟ್ಟರೆಂದು ಹಾಡಿನಲ್ಲಿ ಬಂದಿದೆ. ಜೋಕುಮಾರನ ತಲೆಯನ್ನು ಹೊಡೆಯುವಾಗ ಅವನು ಉಂಡದ್ದು ಅಂಬಲಿಯಾಗಿ ಸೂರಾಡಲು ಭೂಮಿ, ಭೂಮೆಲ್ಲ ಬೆಳೆ ಬಂದಿತಂತೆ. ಕೋಲ್ಮಿಂಚು ಕಾರ್ಮುಳೆಯ ಸುರಿದು ಗುಡ್ಡಗಳೇ ಹೈನಾದುವಂತೆ. ಒಕ್ಕಲಿಗನ ಸೆಜ್ಜೆಯ ಮೇಲೆ ಸಿರಿಬರಲು ಒಕ್ಕಲಿಗನು ಜೋಕುಮಾರನನ್ನು ಹೇಗೆ ಮರೆಯಬೇಕು? ಅಲ್ಲದೆ ಉಂಬದೆ ಉಡದೆ ತಲೆ ಹೊಡೆಯಿಸಿಕೊಂಡು ಹೋದ ಜೋಕುಮಾರನು ಶಿವನ ಮುಂದೆ ಲೋಕದ ದುಃಖದ ಕಥೆಯನ್ನು ಹೇಳಿದನಂತೆ. ಮೋದಕಾನ್ನಗಳ ಭೋಜನ ಮೆರೆದು ಹೋದ ಗಣಪತಿಯೂ ಶಿವನ ಮುಂದೆ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಸುಖವೇ ಉಂಟೆಂದೂ ಆ ಸುಖವನ್ನುಂಡು ತಾನು ತೇಗಿ ತೊನೆದು ಉಬ್ಬಿ ಬಂದೆನೆಂದು ಮುಂಚಿತವಾಗಿ ಹೇಳಿರಲು ಶಿವನು ತನ್ನ ಕಣ್ಣು ತೆಗೆಯದೆ ಇದ್ದನು. ಆಗ ಜೋಕುಮಾರನ ದುಃಖವನ್ನು ಕೇಳಿ ನೋಡಲು ಮಳೆಯಾಗದೆ ಬೆಳೆಗಳು ಒಣಗಿ ಲೋಕದಲ್ಲೆಲ್ಲಾ ಗೋಳಾಟದ ಹಾಹಾಕಾರವೇ ಅವನ ಕಣ್ಣಿಗೆ ಬಿತ್ತಂತೆ. ಶಿವನು ಕರುಣಿಸಿ ಕಣ್ದೆರೆಯಲು ಬೀಸಿ ಮಳೆಯಾಗಿ ಜಲಾಶಯಗಳು ತುಂಬಿದವಂತೆ. ಬೆಳೆಬಂದು ಸುಖಕಾಲ ಬಂದಿತಂತೆ ಎಂಬ ಜನಪದ ಕಥೆಯಿದೆ.[೬]

ಹೀಗೆ ಜೋಕುಮಾರನ ಬಗ್ಗೆ ಪ್ರಾದೇಶಿಕವಾಗಿ ಜನಪದರಲ್ಲಿ ವೈವಿಧ್ಯಮಯವಾಗಿ ಕಥೆಗಳು, ಹಾಡುಗಳು ಹುಟ್ಟಿಕೊಂಡಿವೆ. ಈ ಐತಿಹ್ಯಗಳ ಹಿನ್ನೆಲೆಯಲ್ಲಿ ಜೋಕುಮಾರನ ಶಿಲ್ಪದ ಆಚರಣೆ ಈಗಲೂ ಜೀವಂತವಾಗಿ ಉಳಿದುಬಂದಿದೆ.*

## ೯. ಗುರ್ಚಿ ಮೂರ್ತಿಶಿಲ್ಪದ ಆಚರಣೆ

ಭಾದ್ರಪದ ಅಶ್ವಿನ ಮಾಸಗಳಲ್ಲಿ ಮಳೆಯು ಆಗದಿರಲು ಆಗದಿರಲು ಆಚರಿಸುವ ಆಚರಣೆಗಳಲ್ಲಿ ಗುರ್ಚಿಯ ಮೂರ್ತಿಶಿಲ್ಪದ ಸಂಪ್ರದಾಯವು ಪ್ರಮುಖವಾದುದಾಗಿದೆ.

ಲಿಂಗದಾಕೃತಿಯ ಮೂರ್ತಿಶಿಲ್ಪವನ್ನು ಸೆಗಣಿಯ ಉಂಡಿಯಿಂದ ಮಾಡಿ ಅದಕ್ಕೆ ಮೇಲೆ ಕರಕಿಯ ಪತ್ರಿಯನ್ನು ಚುಚ್ಚುತ್ತಾರೆ. ಇದಕ್ಕೆ 'ಗುರ್ಚಿ' ಎಂದು ಕರೆಯುತ್ತಾರೆ. ಈ ಮೂರ್ತಿಶಿಲ್ಪವನ್ನು ತಯಾರಿಸಿದ ಮೇಲೆ ರೊಟ್ಟಿ ಮಾಡುವ ಹಂಚನ್ನು ತಂದು ಅದನ್ನು ಬೋರಲು ಹಾಕಿ (ಡಬ್ಬ ಹಾಕಿ) ಅದರ ಮೇಲೆ ಗುರ್ಚಿಯ ಮೂರ್ತಿಶಿಲ್ಪವನ್ನು ಅಂಟಿಸುತ್ತಾರೆ. ಹೀಗೆ ಸಿದ್ಧವಾದ ಗುರ್ಚಿಯನ್ನು ಪೂಜಿಸಿ ನಂತರ ತಲೆಯ ಮೇಲೆ ಹೊತ್ತುಕೊಂಡು ಊರಲ್ಲಿ ಮನೆ ಮನೆಗೆ, ಓಣಿ ಓಣಿಗೆ ತಿರುಗುವ ಸಂಪ್ರದಾಯವಿದೆ.

ಸುಮಾರು ಏಳೆಂಟು ವರ್ಷದ ಬಾಲಕ ಅಥವಾ ಬಾಲಕಿ ಈ ಗುರ್ಚಿಯ ಮೂರ್ತಿಶಿಲ್ಪವನ್ನು ತಲೆಯ ಮೇಲೆ ಹೊತ್ತುಕೊಂಡು ಹೊರಡುತ್ತಾರೆ. ಗುರ್ಚಿಯನ್ನು ಹೊತ್ತ ಹುಡುಗ ಬರಿ ಮೈಯಲ್ಲಿದ್ದು ಒಂದು ಲಂಗೋಟಿಯನ್ನು ಮಾತ್ರ ಧರಿಸಿರುತ್ತಾರೆ. ಗುರ್ಚಿ ಹೊತ್ತ ಹುಡುಗನೊಂದಿಗೆ ಮತ್ತೆ ಹತ್ತಾರು ಹುಡುಗರು ಜಮಾಯಿಸಿ ಅವನ ಹಿಂದೆ ಹಿಂದೆ ಹಿಂಬಾಲಿಸುತ್ತಾರೆ. ಮತ್ತು ಓಣಿಯಲ್ಲಿ ಗುರ್ಚಿ

೬. ಡಾ. ಬಿ.ಎಸ್. ಗದ್ದಗೀಮಠ: ಕನ್ನಡ ಜಾನಪದ ಗೀತೆಗಳು, ಪು.೧೫೪

* ಜೋಕುಮಾರನ ಕುರಿತು ಮಾಹಿತಿ ಒದಗಿಸಿದವರು: ಶ್ರೀ ಬಿ.ಬಿ. ಚವಡಪ್ಪನವರ, ಊರು: ಉಪ್ಪಿನ ಬೆಟಗೇರಿ, ಧಾರವಾಡ ಜಿಲ್ಲೆ

ಬಂದಿದೆ ಗುರ್ಚಿ ಬಂದಿದೆ ಬನ್ನಿರಿ ಬನ್ನಿರಿ ಎಂದು ಜನರನ್ನು ಕರೆಯುತ್ತಾರೆ. ಮನೆಯ ಹೆಣ್ಣು ಮಕ್ಕಳು ಹೊರಬಂದು ಗುರ್ಚಿಯ ಮೂರ್ತಿಶಿಲ್ಪಕ್ಕೆ ಕೊಡದಲ್ಲಿಯ ನೀರನ್ನು ತಂದು ತಂಬಿಗೆಯಿಂದ ಗುರ್ಚಿಯ ಸುತ್ತಮುತ್ತ ಹಂಚಿನ ಮೇಲೆ ಸುರುವುತ್ತಾರೆ. ಆ ಸಂದರ್ಭದಲ್ಲಿ ಗುರ್ಚಿಯ ಶಿಲ್ಪವನ್ನು ಹೊತ್ತ ಹುಡುಗ ತನ್ನ ಸುತ್ತಲು ತಿರುಗುತ್ತಿರುತ್ತಾನೆ. ನೀರು ಆಗ ಸುತ್ತಲೂ ವೃತ್ತಾಕಾರವಾಗಿ ಕೆಳಗೆ ಬೀಳುತ್ತದೆ. ನೋಡಲು ಈ ದೃಶ್ಯ ತುಂಬಾ ರಂಜನೀಯವಾಗಿ ಕಾಣಿಸುತ್ತದೆ. ಹೀಗೆ ಪ್ರತಿಯೊಂದು ಮನೆಯವರು ತಮ್ಮ ತಮ್ಮ ಮನೆಯ ಮುಂದೆ ಬಂದ ಗುರ್ಚಿಯ ಮೂರ್ತಿಶಿಲ್ಪಕ್ಕೆ ನೀರನ್ನು ಎರೆಯುತ್ತಾರೆ. ಮತ್ತು ತಮ್ಮ ಯೋಗ್ಯತಾನುಸಾರ ಮೊರದಲ್ಲಿ ಭತ್ತ, ರಾಗಿ, ಜೋಳ ಇತ್ಯಾದಿ ಕಾಳುಗಳನ್ನು ಕಾಣಿಕೆಯಾಗಿ ಕೊಡುತ್ತಾರೆ. ಕೆಲವು ಹುಡುಗರು ಈ ಕಾಳುಗಳನ್ನು ಸಂಗ್ರಹಿಸುತ್ತಾರೆ.

ಗುರ್ಚಿಯ ಮೂರ್ತಿಶಿಲ್ಪವನ್ನು ಸಾಮಾನ್ಯವಾಗಿ ಮಳೆಯಾಗದೆ ಇರುವ ಸಮಯದಲ್ಲಿ ಹಿರಿಯರು ಕಿರಿಯ ಮಕ್ಕಳಿಗೆ ಗುರ್ಚಿಯ ಶಿಲ್ಪವನ್ನು ಮಾಡಿ ಊರಲ್ಲಿ ಆಡಲು ಹೇಳುತ್ತಾರೆ. ಆಗ ಬಡ ಹುಡುಗರು ಕೆಲವು ಕಡೆಗೆ ಕೊರವರ ಹುಡುಗರು ಈ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಮಕ್ಕಳೇ ವಿಶೇಷವಾಗಿ ಈ ಸಂಪ್ರದಾಯದಲ್ಲಿ ಇರುವುದು ವೈಶಿಷ್ಟ್ಯವಾಗಿದೆ.

ಮನೆ ಮನೆಯ ಮುಂದೆ ಗುರ್ಚಿಯ ಮೂರ್ತಿಯನ್ನು ಹೊತ್ತ ಹುಡುಗ ಹಾಗೂ ಇನ್ನುಳಿದ ಹುಡುಗರು ಗುರ್ಚಿಯ ಹಾಡನ್ನು ಹೇಳುತ್ತಾರೆ. ಮಾದರಿಗಾಗಿ ಒಂದೆರಡು ಸಾಲುಗಳು ಹೀಗಿವೆ:

ಗುರ್ಚಿ ಗುರ್ಚಿ ಎಲ್ಲಾಡಿ ಬಂದಿ
ಹಳ್ಳಾ ಕೊಳ್ಳಾ ತಿರುಗಾಡಿ ಬಂದಿ
ಕಾರ ಮಳಿಯೇ ಕಪ್ಪತ ಮಳಿಯೇ
ಸುರಿಮಳೆಯೇ ಸುರಿಮಳಿಯೇ......

ಇತ್ಯಾದಿ ಅನೇಕ ಹಾಡುಗಳನ್ನು ಹೇಳುತ್ತ ಊರ ಸಂಚಾರ ಮಾಡುತ್ತಾರೆ. ಊರೆಲ್ಲ ತಿರುಗಾಡಿದ ಬಳಿಕ ಗುರ್ಚಿಗೆ ಮಳೆ ಬರಲೆಂದು ಕೊನೆಗೆ ವಿಶೇಷವಾಗಿ ಪೂಜೆ ಮಾಡುತ್ತಾರೆ. ಗುರ್ಚಿ ಹೊತ್ತ ಹುಡುಗರ ಮನೆಯಲ್ಲಿ ಅಂದು ಹಬ್ಬದ ಊಟ ಮಾಡಿ ಗುರ್ಚಿಗೆ ನೈವೇದ್ಯ ಸಲ್ಲಿಸುವುದರೊಂದಿಗೆ ಗುರ್ಚಿಯಶಿಲ್ಪವನ್ನು ನೀರಲ್ಲಿ ವಿಸರ್ಜಿಸುತ್ತಾರೆ. ಗುರ್ಚಿಯ ಮೂರ್ತಿಶಿಲ್ಪದ ಆಟವಾಡಿದ ಒಂದು ವಾರದಲ್ಲಿ ಮಳೆ ಬಂದೇ ಬರುತ್ತದೆ ಎಂಬ ಬಲವಾದ ನಂಬಿಗೆಗಳು ಜನಪದರಲ್ಲಿ ವಿಶೇಷವಾಗಿ ಕಂಡು ಬರುತ್ತದೆ.

## ೧೦. ಶೀಗಿ, ಗೌರಿ ಮೂರ್ತಿಶಿಲ್ಪಗಳ ಆಚರಣೆ

ಉತ್ತರ ಕರ್ನಾಟಕದಲ್ಲಿ ಶೀಗಿ ಹಾಗೂ ಗೌರಿ ಹುಣ್ಣಿವೆಗಳಲ್ಲಿ ಈ ಮೂರ್ತಿಶಿಲ್ಪದ ಆಚರಣ ನಡೆಯುತ್ತದೆ. ಇಲ್ಲಿಯೂ ಸ್ತ್ರೀಯರೇ ಪ್ರಮುಖವಾಗಿ ಭಾಗವಹಿಸುತ್ತಾರೆ. ಆದ್ದರಿಂದ ಶೀಗಿಗೌರಿಗಳ ಮೂರ್ತಿಶಿಲ್ಪದ ಆಚರಣೆ ಸ್ತ್ರೀ ಪ್ರಧಾನವಾದ ಸಂಪ್ರದಾಯವೆನ್ನಬಹುದು.

### ೧೦.೧. ಶೀಗಿ ಶಿಲ್ಪದ ಆಚರಣೆ

ಅಶ್ವಿನಿ ಶುದ್ಧ ಹುಣ್ಣಿಮೆಯೇ ಶೀಗಿಹುಣ್ಣಿವೆ. ಈ ಹುಣ್ಣಿವೆಯಲ್ಲಿ ರೈತರು ಹೊಲದಲ್ಲಿ

ಭೂತಾಯಿಗೆ ಪೂಜೆ ಮಾಡಿ ಚರಗ ಚಲ್ಲುವ ಸಂಪ್ರದಾಯ ಇದೆ. ಈ ಹುಣ್ಣಿವೆಯ ಐದು ದಿನ ಹಿಂದೆ ಪಾಂಡವರು ಅಜ್ಞಾತವಾಸಕ್ಕೆ ಹೋದ ಸ್ಮರಣೆಗಾಗಿ ಪಾಂಡವರ ಐದು ಕಲ್ಲುಗಳನ್ನು ಪೂಜಿಸುವ ವಾಡಿಕೆ ಇದೆ. ಚರಗದ ಬುಟ್ಟಿಗಳಲ್ಲಿ ತುಂಬ ಸುಂದರವಾದ ಚಿತ್ರ ವಿನ್ಯಾಸಗಳನ್ನು ಚಿತ್ರಿಸುತ್ತಾರೆ. ಬುಟ್ಟಿಗೆ ಕಾವಿಯನ್ನು ಬಳಿದು ಅದರ ಮೇಲೆ ನಿಚ್ಚಣಿಕೆ, ಚೇಳು, ಗಿಳಿ, ಹೂ ಹಣ್ಣು ಹಾವು, ಸೂರ್ಯ-ಚಂದ್ರ ಇತ್ಯಾದಿ ಹಲವಾರು ತಮ್ಮ ದೈನಂದಿನ ಬದುಕಿನ ಚಿತ್ರಗಳನ್ನು ಸುಣ್ಣದ ಬಿಳಿಯ ಬಣ್ಣದಿಂದ ಚಿತ್ರಿಸಿರುತ್ತಾರೆ.

ಹೊಲದಲ್ಲಿ ಚರಗ ಚಲ್ಲಿದ ಮೇಲೆ ಕೆಲವರು ಶೀಗಿಯನ್ನು ಮಣ್ಣಿನಿಂದ ಮಾಡಿ ಪೂಜಿಸುತ್ತಾರೆ. ಇನ್ನು ಕೆಲವರು ಮನೆಗೆ ಬರುವಾಗ ಮಣ್ಣನ್ನು ತಂದು, ಮನೆಯಲ್ಲಿ ಮಣ್ಣನ್ನು ಮಿದ್ದಿ ಹದಮಾಡಿ ಎರಡು ಶೀಗಿಗಳನ್ನು ತಯಾರಿಸುತ್ತಾರೆ. ಇವು ಅಡಕಲ ಗಡಿಗೆಯ ಹಾಗೆ ಒಂದರ ಮೇಲೆ ಒಂದರಂತೆ ಶಿಖರದ ಆಕಾರವನ್ನು ಹೊಂದಿರುತ್ತವೆ. ಶೀಗಿ ಸಂಸ್ಕೃತದ 'ಶಿಖಾ' ಶಬ್ದದ ತದ್ಭವವಾಗಿದ್ದು ಅದು ಶಿಖರ, ಶಿಖ, ಶೀಗಿ ಆಗಿರುವಂತಿದೆ. ಇಲ್ಲಿ ರಚಿಸುವ ಮೂರ್ತಿಶಿಲ್ಪದ ವಿನ್ಯಾಸಗಳು ಶಿಖರದಾಕೃತಿಯಲ್ಲಿಯೇ ರಚನೆಯಾಗಿರುವುದನ್ನು ಕಾಣಬಹುದು. ಈ ವಿನ್ಯಾಸಗಳು ಐದು ಏಳು ಒಂಬತ್ತು ಹೀಗೆ ಹತ್ತೊಂಬತ್ತು ಬೆಸ ಸಂಖ್ಯೆಯ ಸುತ್ತುಗಳಿಂದ ರಚಿಸಲ್ಪಟ್ಟಿರುವುದೂ ಉಂಟು. ದೊಡ್ಡ ಹಾಗೂ ಚಿಕ್ಕ ಗಾತ್ರದ ಶಿಲ್ಪಗಳನ್ನು ರಚಿಸುತ್ತಾರೆ. ಈ ಶಿಲ್ಪಗಳ ಮುಂದೆ ಐದು ಸಣ್ಣ ಗಾತ್ರದ ಶಿಲ್ಪಗಳನ್ನು ಮಾಡಿ ಇಡುವುದು ಉಂಟು. ಇವುಗಳಿಗೆ ಚೌಕದ ತಳದ ವಿನ್ಯಾಸವು ಇರುವುದುಂಟು. ಇವುಗಳನ್ನು ಪಾಂಡವರೆಂದೂ ಕೊಂತಿಮಕ್ಕಳೆಂದೂ ಕರೆಯುತ್ತಾರೆ. ಕೆಲವರು ಕಟ್ಟಿಗೆಯಿಂದಲೂ ಈ ಶಿಲ್ಪವನ್ನು ಮಾಡಿಸಿ ಇಟ್ಟಿರುತ್ತಾರೆ.

ಶೀಗಿ ಹುಣ್ಣಿವೆ ಇನ್ನೂ ಐದು ದಿನವಿದೆಯೆನ್ನುವಾಗಲೇ ಈ ಶೀಗಿಯನ್ನು ಇಟ್ಟು ಪೂಜೆ ಮಾಡುತ್ತ ಬರುವ ಸಂಪ್ರದಾಯವಿದೆ. ದಿನಂಪ್ರತಿ ಹೆಂಗಸರು, ಹುಡುಗಿಯರು, ಮನೆಮನೆಗೆ ಹೋಗಿ ಆರತಿ ಬೆಳಗಿ ಹಾಡು ಹೇಳಿ ಬರುತ್ತಾರೆ. ಐದನೆಯ ದಿನಕ್ಕೆ ಈ ಶಿಗೆಯನ್ನು ಕಳುಹಿಸಲು ವಿವಿಧ ರೀತಿಯ ರುಚಿಕರವಾದ ಊಟವನ್ನು ತೆಗೆದುಕೊಂಡು ಕೆರೆ ಅಥವಾ ಬಾವಿ ನದಿ ಇತ್ಯಾದಿ ಜಲಾಶಯದ ಹತ್ತಿರ ಊಟಮಾಡಿ ಶೀಗಿಯನ್ನು ಕಳುಹಿಸಿಬರುತ್ತಾರೆ. ಹೀಗೆ ಹೋಗುವ ದಿವಸ ಕಣಕದ ಆರತಿ ಮಾಡುತ್ತಾರೆ. ಇವುಗಳನ್ನು ಗಂಡಸರು ತಿಂದರೆ ಮೀಸೆ ಬರುವುದಿಲ್ಲವೆಂಬ ನಂಬಿಗೆಗಳಿವೆ.

### ೧೦.೨. ಗೌರಿಯ ಮೂರ್ತಿಶಿಲ್ಪದ ಆಚರಣೆ

ಸೀಗಿಯ ಮೂರ್ತಿಶಿಲ್ಪದ ಸಂಪ್ರದಾಯದಂತೆ ಗೌರಿಯ ಮೂರ್ತಿಶಿಲ್ಪದ ವಿಧಿ-ವಿಧಾನಗಳು ನಡೆಯುತ್ತವೆಯಾದರೂ ಅಲ್ಪ ಸ್ವಲ್ಪ ವ್ಯತ್ಯಾಸ ವೈವಿಧ್ಯತೆಗಳು ಇಲ್ಲಿ ವಿಫುಲವಾಗಿ ಕಂಡುಬರುತ್ತವೆ. ಗೌರಿ ಹುಣ್ಣಿವೆಯಲ್ಲಿ ಈ ಮೂರ್ತಿಶಿಲ್ಪದ ಆಚರಣೆಯೂ ನಡೆಯುತ್ತದೆ.

ಗೌರಿಯ ಪೂಜೆಗಳಲ್ಲಿ ಹಲವಾರು ವಿಧಾನಗಳಿವೆ. ಅಷ್ಟಮಿಯ ಗೌರಿ, ತೊಟ್ಟಿಲಗೌರಿ, ಮಂಗಲಗೌರಿ, ಸಂಪತ್ತು ಗೌರಿ, ಗಜಗೌರಿ, ಕುಂಕುಮ ಗೌರಿ ಹೀಗೆ ಹಲವಾರು ರೀತಿಯ ಗೌರಿಗಳನ್ನು ಹಳ್ಳಿಯ ಹೆಣ್ಣುಮಕ್ಕಳು ಪೂಜಿಸುವ ಸಂಪ್ರದಾಯ ಕಂಡುಬರುತ್ತದೆ.

ಹುಣ್ಣಿವೆಯಲ್ಲಿ ಐದು ದಿನವಿರುವಾಗಲೇ ಹಳ್ಳಿಯ ಹೆಣ್ಣು ಮಕ್ಕಳು ಬೆಳದಿಂಗಳಲ್ಲಿ ಮನೆಯಲ್ಲಿ ಗೌರಿಯನ್ನು ಕುಳ್ಳಿರಿಸಿ ಪೂಜಿಸಿ ದಿನವೊಂದು ತರಹದ ಸಕ್ಕರೆಯ ಪ್ರಾಣಿ, ಪಕ್ಷಿಗಳ ವೈವಿಧ್ಯಮಯವಾದ ಆರತಿಗಳನ್ನು ಮಾಡಿ ಹೂಗಳನ್ನು ಗೌರಿಗೆ ಏರಿಸಿ ಆರತಿ ಬೆಳಗುವ ಆಚರಣೆಯಿದೆ. ಗೌರಿಯ ಶಿಲ್ಪವನ್ನು ಊರಲ್ಲಿ ಕುಂಬಾರರು, ಬಡಿಗರು, ಅಕ್ಕಸಾಲಿಗರು ಮುಂತಾದ ಜನಾಂಗದವರು, ಮಣ್ಣಿನ ಈ ಶಿಲ್ಪವನ್ನು ಮಾಡುತ್ತಾರೆ. ಇಲ್ಲಿ ಶಿವ, ಹಾಗೂ ಗೌರಿ ಗಂಗೆಯರ ಶಿಲ್ಪಗಳಿರುತ್ತವೆ. ಕುಳಿತ ಭಂಗಿಯ ಶಿವನ ಮೂರ್ತಿಶಿಲ್ಪದಲ್ಲಿ ಶಿವನ ತೊಡೆಯ ಮೇಲೆ ಗೌರಿಯ ಶಿಲ್ಪ ಶಿವನ ತಲೆಯ ಜಡೆಯಲ್ಲಿ ಗಂಗೆಯ ಮೂರ್ತಿಶಿಲ್ಪವನ್ನು ಮಾಡಿರುತ್ತಾರೆ. ಈ ಶಿಲ್ಪವನ್ನು ಒಟ್ಟಾರೆಯಾಗಿ ಗೌರಿಯ ಶಿಲ್ಪವೆನ್ನುತ್ತಾರೆ. ಈ ಮೂರೂ ಮೂರ್ತಿಶಿಲ್ಪಗಳಿಗೆ ಸ್ಥಳೀಯ ಕಲಾವಿದರೇ ತಯಾರಿಸಿದ ಹಸಿರು, ಕೆಂಪು, ಹಳದೀ, ಕಪ್ಪು ಇತ್ಯಾದಿ ಬಣ್ಣದ ಅಲಂಕಾರ ಮಾಡಿರುತ್ತಾರೆ. ಇನ್ನು ಕೆಲವರು ಕಟ್ಟಿಗೆಯಿಂದಲೇ ಈ ಮೂರ್ತಿಶಿಲ್ಪವನ್ನು ಅಖಂಡವಾಗಿ ಒಂದೇ ಶಿಲ್ಪದಲ್ಲಿ ಮಾಡಿಸಿರುತ್ತಾರೆ. ಆ ಶಿಲ್ಪವನ್ನೇ ಗೌರಿ ಹುಣ್ಣಿವೆಯಲ್ಲಿ ಪೂಜೆಗಾಗಿ ಬಳಸುತ್ತಾರೆ.

ಐದು ದಿನಗಳವರೆಗೆ ಮನೆಮನೆಗೆ ರಾತ್ರಿ ಹೆಂಗಸರು ಹೋಗಿ ಗಂಗೆ-ಗೌರಿಯ ಕುರಿತು ಸ್ಪರ್ಧಾತ್ಮಕವಾಗಿ ಹಾಡು ಹೇಳುತ್ತಾರೆ. ಬೆಳದಿಂಗಳಲ್ಲಿ ಕೆಲವರು ಎರಡು ಗುಂಪಾಗಿ ಗಂಗೆ-ಗೌರಿ ಆಟ ಆಡುತ್ತಾರೆ. ಕೊನೆಗೆ ಅಂದರೆ ಗೌರಿ ಹುಣ್ಣಿವೆಯ ದಿವಸ ಆನೆ ಅಂಬಾರಿ ಕಟ್ಟಿ ಸಂಭ್ರಮ ಸಡಗರದಿಂದ ಗೌರಿಯನ್ನು ಗಂಡನ ಮನೆಗೆ ಕಳಿಸುವ ಕಾರ್ಯಕ್ರಮ ತುಂಬ ರಸವತ್ತಾಗಿ ರಾತ್ರಿಯ ವೇಳೆಯಲ್ಲಿ ನಡೆಯುತ್ತದೆ. ಹೊಸ ಗಡಿಗೆಗಳನ್ನು ತಂದು ಅವುಗಳಿಗೆ ವಿವಿಧ ಬಣ್ಣಗಳಿಂದ ಅಲಂಕರಿಸುತ್ತಾರೆ. ಗಡಿಗೆಗಳಿಗೆ ಅನೇಕ ಸುಳುವುಗಳನ್ನು ಸೂರ್ಯ ಚಂದ್ರ ನಕ್ಷತ್ರ ಹೂ ಮುಂತಾದ ಚಿತ್ರ ವಿನ್ಯಾಸಗಳನ್ನು ಮಾಡಿರುತ್ತಾರೆ. ಇವು ಒಂದಕ್ಕೊಂದು ಸ್ಪರ್ಧಾತ್ಮಕವಾಗಿ ಅಲಂಕರಣಗೊಂಡಿರುತ್ತವೆ. ರಂಧ್ರ ಮಾಡಿದ ಗಡಿಗೆಯೊಳಗೆ ದೀಪವನ್ನು ಹಚ್ಚಿಕೊಂಡು ರಾತ್ರಿ ಜಲಾಶಯಗಳಲ್ಲಿ (ಕೆರೆ, ಬಾವಿ, ಹಳ್ಳ, ನದಿ) ಬಿಡುವುದು ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಕಂಡು ಬರುವ ಸಾಮಾನ್ಯ ದೃಶ್ಯವಾಗಿದೆ. ಇವುಗಳಿಗೆ ಹೊಂಗಡಗಳೆಂದು ಕರೆಯುತ್ತಾರೆ. ಈ ರೀತಿ ಗೌರಿಯನ್ನು ಕಳಿಸಿ ಹಾಡು ಹೇಳಿ ಆಟವಾಡಿ ಬರುವ ಆಚರಣೆ ನಡೆಯುತ್ತದೆ.

ಶ್ರಾವಣ ಮಾಸದಲ್ಲಿ ಗಡಿಗೆಯ ಮೇಲೆ ಚಿತ್ರಾಲಂಕಾರ ಮಾಡಿದ ಗೌರಿಯ ಮೂರ್ತಿಶಿಲ್ಪವು ಕಂಡು ಬರುತ್ತದೆ. ಮನೆ ಮನೆಯಲ್ಲಿ ಮಣ್ಣಿನ ಹೊಸ ಗಡಿಗೆಗಳನ್ನು ತಂದು ಅವಕ್ಕೆ ಬೆಂಡಿ ಬಾಳಸ್ನು ದಪ್ಪವಾಗಿ ಲೇಪನ ಮಾಡಿ ಚಿತ್ರಾಲಂಕಾರ ಮಾಡುತ್ತಾರೆ. "ಅದರ ಮೇಲೆ ಕಪ್ಪು ಮತ್ತು ಬಿಳಿಯ ಬಣ್ಣದ ಚುಕ್ಕೆಗಳಿಂದ ಹಲವಾರು ಚಿತ್ರಗಳನ್ನು ಕಡ್ಡಿಗಳಿಂದ ಬಣ್ಣದಲ್ಲಿ ಎದ್ದಿ ಚಿತ್ರಿಸಿರುತ್ತಾರೆ. ಹೆಣ್ಣು ಮಕ್ಕಳು ವಿಶೇಷವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಗಡಿಗೆಯ ಪಾರ್ಶ್ವವನ್ನು ಐದು ಭಾಗಗಳಾಗಿ ವಿಭಾಗಿಸಿಕೊಂಡು ಲಕ್ಷ್ಮಿಯ ಮುಖ ಇಲ್ಲವೇ ಸಂಪೂರ್ಣದೇಹ ಆಕಳು, ತುಳಸಿಕಟ್ಟೆ, ಶಂಖ, ಚಕ್ರ ಮುಂತಾದುವನ್ನು ಚಿತ್ರಿಸುತ್ತಾರೆ. ಮುಚ್ಚಳವನ್ನು ಪೂರ್ತಿ ಲಕ್ಷ್ಮಿಯ ಮುಖವನ್ನಾಗಿ ಪರಿವರ್ತಿಸಿಕೊಂಡು ಕೂದಲಿನ ಕಪ್ಪು ಬಣ್ಣವನ್ನು ಕಾಲುಭಾಗಕ್ಕೆ ಬಳಿದು ಮುಕ್ಕಾಲು ಭಾಗದಲ್ಲಿ ಸುಂದರವಾದ ಮುಖವನ್ನು

೭. ಎ.ಪಿ. ಪಾಟೀಲ್: ಉತ್ತರ ಕರ್ನಾಕದ ಜನಪದ ಕಲೆ ಮತ್ತು ವಿಧಿಕ್ರಿಯೆ, ಪು.೧೬೩

ಚಿತ್ರಿಸಲಾಗುತ್ತದೆ. ಮೇಲೆ ಗಿಂಡಿಯನ್ನು ಬಳಸಿ ಚಿತ್ರ ಬರೆಯುತ್ತಾರೆ.[೭] ಗಡಿಗೆಯ ಮೇಲೆ ತೆಂಗಿನ ಕಾಯಿಯನ್ನಿಟ್ಟು ಮುಖದ ವ್ಯವಸ್ಥೆ ಮಾಡಿ ಪೂಜಿಸುತ್ತಾರೆ.

ಇನ್ನು ಕೆಲವು ಕಡೆಗೆ ಚೈತ್ರಮಾಸದಲ್ಲಿ ತೊಟ್ಟಿಲಲ್ಲಿ ಕುಳಿತ ಗೌರಿಯ ಸುಂದರವಾದ ಕಟ್ಟಿಗೆಯ ಮೂರ್ತಿಶಿಲ್ಪವನ್ನು ಮಾಡಿ ವಿವಿಧ ಭಂಗಿಯಲ್ಲಿಟ್ಟು ಪೂಜಿಸುವುದು ಉಂಟು. ಈ ಶಿಲ್ಪವು ಮೂರು ನಾಲ್ಕು ಫೂಟು ಎತ್ತರವಿರುವುದು ಕಂಡು ಬರುತ್ತದೆ.

ಈ ಶಿಲ್ಪಗಳು ಬಣ್ಣಗಾರಿಕೆಯಿಂದ ಕೂಡಿದ್ದು ಹಳದಿ ಬಣ್ಣದ ಬಳಕೆ ಹೆಚ್ಚಾಗಿದ್ದು ಕೆಂಪು ಹಸಿರು ವರ್ಣಗಳು ಲೇಪನಗೊಂಡಿರುತ್ತವೆ. ಅಗಲವಾದ ಹಣೆ, ದುಂಡಾದ ಮುಖ, ಚೂಪಾದ ನೆಟ್ಟಗಿನ ಮೂಗು, ತುಂಬಿದ ಕೆನ್ನೆಗಳು ಶಿಲ್ಪದಲ್ಲಿ ತುಂಬ ಸೊಗಸಾಗಿ ಕೆತ್ತಲ್ಪಟ್ಟಿರುತ್ತವೆ. ಇಂತಹ ಹಲವಾರು ರೀತಿಯ ಗೌರಿಯ ಶಿಲ್ಪಗಳು ಕಂಡು ಬರುತ್ತಿದ್ದು ಅವುಗಳ ಕುರಿತು ಇನ್ನೂ ಹೆಚ್ಚಿನ ಅಧ್ಯಯನವಾಗಬೇಕಾಗಿದೆ.

## ೧೧. ಹಟ್ಟಿಹಬ್ಬದ ಪಾಂಡವರ ಮೂರ್ತಿಶಿಲ್ಪಗಳ ಆಚರಣೆ

ದೀಪಾವಳಿ ಹಬ್ಬವನ್ನು ಹಳ್ಳಿಗಳಲ್ಲಿ ಹಟ್ಟಿ ಹಬ್ಬವೆಂದು ಕರೆಯುತ್ತಾರೆ. ಹೆಣ್ಣುಮಕ್ಕಳು ಈ ಹಬ್ಬಕ್ಕೆ ನೀರು ತುಂಬುವ ಹಬ್ಬವೆಂದೂ ಕರೆಯುವುದು ರೂಢಿಯಲ್ಲಿದೆ. ಜನಪದರಿಗೆ ಹಟ್ಟಿ ಹಬ್ಬದ ಸಂಪ್ರದಾಯ ಬಹಳ ಮಹತ್ವದ ದೊಡ್ಡ ಹಬ್ಬ.

### ೧೧.೧. ಹಟ್ಟಿಹಬ್ಬದ ಪಾಂಡವರ ಮೂರ್ತಿಶಿಲ್ಪಗಳ ರಚನೆ

ಪ್ರತಿಪದೆಯ ದಿವಸ ಸೆಗಣಿಯ ಪಾಂಡವರನ್ನು ಮಾಡಿ ಅವರನ್ನು ಊರಲ್ಲಿ ಬರಮಾಡಿಕೊಳ್ಳುವ ಸಂಪ್ರದಾಯದ ವಿಧಿಕ್ರಿಯೆ ನಡೆಯುತ್ತದೆ. ಸೆಗಣಿಯಿಂದ ಗುಪ್ಪೆಯಾಕೃತಿಯ ನೂರಾರು ಮೂರ್ತಿಶಿಲ್ಪಗಳನ್ನು ಹೆಣ್ಣುಮಕ್ಕಳು ರಚಿಸುತ್ತಾರೆ. ಅಂದು ಮನೆಯಲ್ಲಿ ಈ ಹಬ್ಬಕ್ಕಾಗಿಯೇ ದನಗಳ ಸೆಗಣಿಯನ್ನು ಮೊದಲೇ ಸಂಗ್ರಹಿಸಿಟ್ಟುಕೊಂಡಿರುತ್ತಾರೆ. ತಮಗೆ ಇಷ್ಟವೆನಿಸಿದ ಸೆಗಣಿಯ ವಾಸ್ತುವಿನ್ಯಾಸಗಳು, ಅಲ್ಲಿ ತಯಾರಾಗುತ್ತವೆ. ಉದಾ: ಬಾವಿ, ಕೋಟೆ, ಬೀಸುವಕಲ್ಲು, ಮನೆ, ಪ್ರಾಣಿ, ಪಕ್ಷಿಗಳು ಆಕಾರ ಪಡೆಯುತ್ತವೆ. ಇವುಗಳನ್ನು ಬಾಗಿಲಲ್ಲಿ, ಹೊಸ್ತಿಲಲ್ಲಿ, ಮನೆಯ ಮೂಲೆ ಮೂಲೆಗಳಲ್ಲಿ ಹಟ್ಟಿಯಲ್ಲಿ ಬೀಸುವ ಕಲ್ಲಿನ ಮೇಲೆ ತಿಪ್ಪೆಯ ಮೇಲೆ ಹೀಗೆ ಮನೆಯಲ್ಲೆಲ್ಲಾ ಈ ಗುಪ್ಪೆಯಾಕೃತಿಯ ಶಿಲ್ಪಗಳನ್ನು ಮಾಡಿ ಇಡುತ್ತಾರೆ. ಇವುಗಳಿಗೆ ತಲೆಯ ಮೇಲೆ ಉತ್ತರಾಣಿ ಕಡ್ಡಿಯನ್ನು ಅವರೆಯ ಹೂವನ್ನೋ ಹೊನ್ನಾವರಿಯ ಹೂ ದಂಟುಗಳನ್ನು ಚುಚ್ಚುತ್ತಾರೆ. ಮನೆಯ ಒಂದು ಭಾಗದಲ್ಲಿ ಮಾತ್ರ ವೃತ್ತಾಕಾರವಾಗಿ ಸಾರಿಸಿದ ನೆಲದ ಮೇಲೆ ಒಂದು ನೂರಾ ಒಂದು ಇಂತಹ ಗುಪ್ಪೆಯಾಕೃತಿಯ ಶಿಲ್ಪಗಳನ್ನು ಮಾಡಿ ನಡುವೆ ಒಂದು ದೊಡ್ಡದಾದ ಇಂತಹದೆ ಗುಪ್ಪೆಯಾಕೃತಿಯ ಶಿಲ್ಪವನ್ನು ಮಾಡಿಡುತ್ತಾರೆ. ಇದಕ್ಕೆ ಗಾಂಧಾರಿ ಎಂದು ಉಳಿದವುಗಳಿಗೆ ಪಾಂಡವ ಕೌರವರೆಂದು ಒಂದು ಗುಪ್ಪೆಗೆ ಕರ್ಣನೆಂದು ಕರೆಯುತ್ತಾರೆ. ಇನ್ನು ಕೆಲವರು ಈ ದೊಡ್ಡ ಶಿಲ್ಪಕ್ಕೆ "ಹಟ್ಟೆವ್ವ" ನೆಂದು ಹಟ್ಟಿಯ ಲಕ್ಕವ್ವನೆಂದು ಉಳಿದವುಗಳನ್ನು ಗುರ್ಚಿಗಳೆಂದು ಕರೆಯುತ್ತಾರೆ. ಪ್ರಾದೇಶಿಕವಾಗಿ ಈ ಹಬ್ಬದ ಮೂರ್ತಿಶಿಲ್ಪಗಳಲ್ಲಿ ವೈವಿಧ್ಯತೆಗಳು ಕಂಡು ಬರುತ್ತವೆ.

ಅಂದು ಪಾಂಡವರ ಹೆಜ್ಜೆಯ ಗುರುತುಗಳೆಂದು ಕಾವಿಯ ಮಣ್ಣಿನ ಮೇಲೆ ಸುಣ್ಣದ ಹೆಜ್ಜೆಯ ಚಿತ್ರಗಳನ್ನು ಮನೆಯ ಎಲ್ಲ ಕೊಠಡಿಗಳಲ್ಲಿ ಹಟ್ಟಿಯ ಹೊರಗೆ ಎಲ್ಲೆಲ್ಲೂ ಇಂತಹ ಹೆಜ್ಜೆಯ ಚಿತ್ರಗಳನ್ನು ಚಿತ್ರಿಸಿರುತ್ತಾರೆ. ಈ ವಾಸ್ತು ಮೂರ್ತಿಶಿಲ್ಪಗಳಿಗೆ ಹೊಸ ಬೆಳೆಯ ಧಾನ್ಯಗಳಿಂದ ಅಡಿಗೆ ಮಾಡಿ ಪೂಜೆ ಸಲ್ಲಿಸಿ ನೈವೇದ್ಯ ಮಾಡುವ ಸಂಪ್ರದಾಯವಿದೆ.

ಮರುದಿವಸ ಈ ಎಲ್ಲ ಸೆಗಣಿಯ ಮೂರ್ತಿಶಿಲ್ಪಗಳನ್ನು ಮನೆಯ ಮಾಳಿಗೆಯ ಕುಂಬಿಗಳ ಮೇಲೆ ಸಾಲಾಗಿ ಇಡುತ್ತಾರೆ. ಊರಲ್ಲಿ ಎಲ್ಲರೂ ತಮ್ಮ ತಮ್ಮ ಮನೆಯ ಮೇಲೆ ಹೀಗೆ ಇಡುವುದರಿಂದ ಊರಿನ ಎಲ್ಲ ಮನೆಯ ಕುಂಬಿಗಳು ತುಂಬಾ ಅಲಂಕಾರಯುತವಾಗಿ ಶೋಭಿಸುತ್ತವೆ.

ಕೆಲವು ಭಾಗದಲ್ಲಿ ಅಕ್ಕನ ತದಿಗೆಯದಿನ ಇಲ್ಲವೆ ಕಡೆಯ ಪಂಚಮಿಯ ದಿನ ಈ ಎಲ್ಲ ಗುಪ್ಪೆಗಳನ್ನು (ಗುರ್ಚಿಗಳನ್ನು) ಸೇರಿಸಿಯಾದ ದೊಡ್ಡ ಸೆಗಣಿಯ ಶೇಖರಣೆಯಿಂದ ಮಾಳಿಗೆ ಮೇಲೆ ಒಂದು ಭಾಗದಲ್ಲಿ ಅಲ್ಲಿಕೇರಿಯನ್ನು ನಿರ್ಮಿಸುವ ವಾಸ್ತು ವಿನ್ಯಾಸದ ರಚನೆಯ ಕಾರ್ಯ ಈ ಸೆಗಣಿಯಿಂದ ನಡೆಯುತ್ತದೆ. ಸೆಗಣಿಯ ಸಂಗ್ರಹ ಹೆಚ್ಚಿಗೆ ಇದ್ದಷ್ಟು ಅಲ್ಲಿಕೇರಿ ತುಂಬ ದೊಡ್ಡದಾಗಿ ಚೆನ್ನಾಗಿ ಆಗುತ್ತದೆ ಎನ್ನುತ್ತಾರೆ. ಕಟ್ಟೆಯ ಮೇಲೆ ಕಟ್ಟೆಗೆಯ ಹಾಗೆ ಒಂದರ ಮೇಲೆ ಒಂದೊಂದು ಶಿಖರದ ಹಾಗೆ ರಚನೆಯಾಗುವ ಈ ವಾಸ್ತುವಿನ್ಯಾಸದ ತಳವು ವರ್ತುಳಾಕಾರವನ್ನು ಹೊಂದಿರುತ್ತದೆ. ಇಲ್ಲಿಯೂ ಕಲ್ಲೊಂದನ್ನು ಇಟ್ಟು ಇನ್ನೂ ಕೆಲವು ಸಲ ಬಸವಣ್ಣನನ್ನು ಮಾಡಿ ಮಾಳಿಗೆಯ ಮೇಲೆ ಪೂಜಿಸಿ ಊಟ ಮಾಡಿ ಹಾಡು, ಹರಟೆ ಹೊಡೆದು ಆಡಿ ಬರುವ ಕಾರ್ಯಕ್ರಮವು ನಡೆಯುತ್ತದೆ. ಇದು ಅಲ್ಲಿಕೋಟೆಯ ಇನ್ನೊಂದು ರೂಪದ ಆಚರಣೆಯೆನ್ನಬಹುದು.

## ೧೨. ಹೋಳಿ ಹಬ್ಬದ ಕಾಮಣ್ಣ ರತಿಶಿಲ್ಪಗಳ ಆಚರಣೆ

ಹೋಳಿ ಹಬ್ಬಕ್ಕೆ ಕಾಮನ ಹಬ್ಬವೆಂದು ಕರೆಯುತ್ತಾರೆ. ಭಾರತದಲ್ಲಿ ಆಚರಿಸುವ ಪುರುಷ ಪ್ರಧಾನ ಹಬ್ಬಗಳಲ್ಲಿ ಇದು ಒಂದೇ ಹಬ್ಬವೆಂದು ಹೇಳಲಾಗುತ್ತದೆ. ವಿಷ್ಣು ಪುರಾಣ, ಭಾಗವತ, ಲಿಂಗಪುರಾಣ ಮುಂತಾದ ಕಡೆಗೆ ಬರುವ ಶಿವನ ಕಥೆಯ ಹಿನ್ನೆಲೆಯಲ್ಲಿ ಈ ಹಬ್ಬ ಆಚರಣೆಗೊಳ್ಳುತ್ತದೆ.[೮]

ಲೋಕಕಲ್ಯಾಣಕ್ಕಾಗಿ ಕಾಮನು ಶಿವನ ತಪಸ್ಸನ್ನು ಕೆಡಿಸಿದ್ದು ಶಿವನ ಉರಿಗಣ್ಣಿನಿಂದ ಕಾಮ ಸುಟ್ಟು ಹೋದದ್ದು ಮುಂದೆ ಶಿವನಿಂದ ಮತ್ತೆ ಜೀವಿಸುವಂತೆ ವರಪಡೆದ ಕಾಮನ ಕಥೆಯ ಆಧಾರದ ಮೇಲೆ ಈ ಸಂಪ್ರದಾಯ ಜನಪದರಲ್ಲಿ ಬೆಳೆದು ಬಂದಿದೆ.

### ೧೨.೧. ಕಾಮಣ್ಣ ಮತ್ತು ರತಿಯ ಶಿಲ್ಪದ ರಚನೆ

ಕಾಮನು ತುಂಬ ಸುಂದರನೆಂದು ಅವನನ್ನು ಎಲ್ಲರೂ ಹಾಡಿ ಹೊಗಳಿರುವುದು ಸರ್ವವಿದಿತ. ಚಲುವಿಕೆಗೆ ಇನ್ನೊಂದು ಹೆಸರೇ ಕಾಮ. ಇಂತಹ ಚಲುವಿನ ಹಿನ್ನೆಲೆಯಿರುವ ಕಾಮನ ಶಿಲ್ಪವನ್ನು ಅತ್ಯಂತ ರಸಿಕತನದಿಂದ ಸೊಗಸುಗಾರಿಕೆಯಿಂದ ನಿರ್ಮಿಸುತ್ತಾರೆ. ಹೋಳಿ ಹುಣ್ಣಿವೆಯ ದಿವಸ ಕಾಮನ

೮. ನವಲಗುಂದ (ಧಾರವಾಡ ಜಿಲ್ಲೆ), ಇಲ್ಲಿ ಆಚರಿಸುವ ರಾಮಲಿಂಗ ಕಾಮಣ್ಣ ಹೆಸರಿನ ಕಾಮಣ್ಣನ ಶಿಲ್ಪವು ತುಂಬ ಪ್ರಸಿದ್ಧಿಯನ್ನು ಪಡೆದಿವೆ. ಇಲ್ಲಿ ಜಾತಿ ಬೇಧವಿಲ್ಲದೆ ಎಲ್ಲ ಜನಾಂಗದವರು ಈ ಶಿಲ್ಪಕ್ಕೆ ನಡೆದುಕೊಳ್ಳುತ್ತಾರೆ. ಬೇರೆ ರಾಜ್ಯಗಳ ಜನರೂ ಸಹ ಬಂದು ಹರಕೆ ಹೊತ್ತು ಕಾಣಿಕೆ ಸಲ್ಲಿಸುತ್ತಾರೆ.

ಸುಂದರವಾದ ಮೂರ್ತಿಶಿಲ್ಪವನ್ನು ಮಾಡಿಸಿ ಊರಲ್ಲಿಯ ಕಾಮನ ಕಟ್ಟೆಯ ಚಾವಡಿಯಲ್ಲಿ ಅವನನ್ನು ಅಲಂಕಾರ ಮಾಡಿ ಪೂಜಿಸುವ ಆಚರಣೆಯಿದೆ.

ಇನ್ನೂ ಕೆಲವು ಕಡೆಗೆ "ದೊಡ್ಡ ಕೋಲನ್ನು ನಿಲ್ಲಿಸಿ ಹುಲ್ಲು ಹರಿದ ಅರಿವೆ ಮುಂತಾದವನ್ನು ಕಟ್ಟಿ ಬಟ್ಟೆ ತೊಡಿಸಿ ಮೇಲೆ ಗಡಿಗೆಯ ಮುಖ ಹಾಕಿರುವ ದೊಡ್ಡ ಆಕೃತಿಯೂ ಬಹಳಷ್ಟು ಕಡೆಗೆ ನೋಡಲು ಸಿಗುತ್ತದೆ. ಸಾಮಗ್ರಿಗಳು ಹೆಚ್ಚಾದಂತೆ ಈ ಆಕೃತಿಗೊಂದು ಗಣಿಸಬಲ್ಲ ಗಾತ್ರ ಬರುತ್ತದೆ. ಅನೇಕ ಕಡೆಗಳಲ್ಲಿ ನಗೆಯ ಹುಯಿಲೆಬ್ಬಿಸುವಂತೆ ಈ ಆಕೃತಿ ರೂಪಿತವಾಗಿದ್ದರೆ, ಕೆಲವು ಕಡೆಗೆ ದೊಡ್ಡದಾಗಿ ಭಯಹುಟ್ಟಿಸುವಂತಿರುತ್ತದೆ. ಸೊಗಸಾದ ಬಟ್ಟೆಯನ್ನು ತೊಡಸಿ ಮನುಷ್ಯಾಕೃತಿಗಿಂತ ದೊಡ್ಡದಾಗಿ ರೂಪಿಸಿರುತ್ತಾರೆ. ಸುಂದರವಾದ ಕಟ್ಟಿಗೆಯ ಮುಖ ಕೈಕಾಲುಗಳಿದ್ದು ಇದನ್ನು ಜೋಡಿಸಿ ದೊಡ್ಡ ಮುಂಡಾಸು ಸುತ್ತಲಾಗಿರುತ್ತದೆ. ಕೈಯಲ್ಲಿ ಬಿಲ್ಲು ಹಿಡಿದು ಬಾಣ ಹೊಡೆಯಲು ಸಿದ್ಧನಾಗಿ ನಿಂತಿರುವಂತೆ ಮೂರ್ತಿಯನ್ನು ಮಾಡಿರುವುದು ಸಾಮಾನ್ಯ ವಾಡಿಕೆ" ಪ್ರಾದೇಶಿಕವಾಗಿ ಈ ಶಿಲ್ಪದಲ್ಲಿ ಹಲವಾರು ವ್ಯತ್ಯಾಸಗಳು ಕಂಡು ಬರುತ್ತವೆ. ಕೆಲವು ಭಾಗದಲ್ಲಿ ಸಂಪೂರ್ಣವಾಗಿ ಕಟ್ಟಿಗೆಯಿಂದಲೇ ಕಾಮನ ಮೂರ್ತಿಶಿಲ್ಪ ರಚನೆಯಾಗುತ್ತದೆ. ಅವನೊಂದಿಗೆ ರತಿಯ ಹೆಣ್ಣು ಶಿಲ್ಪವನ್ನು ಮಾಡಿ ಕಾಮನ ತೊಡೆಯ ಮೇಲೆ ಕೂರಿಸಲಾಗುತ್ತದೆ. ಇನ್ನೂ ಹಲವು ಊರುಗಳಲ್ಲಿ ಕಾಮ ಮತ್ತು ರತಿಯ ಮಣ್ಣಿನ ಶಿಲ್ಪಗಳನ್ನು ಮಾಡಿ ಮುಖಕ್ಕೆ ಬಣ್ಣದ ಲೇಪನ ಮಾಡಿ ಆಕರ್ಷಕವಾಗಿ ಅಲಂಕರಿಸುತ್ತಾರೆ.

ಒಟ್ಟಾರೆ ರಾತ್ರಿಯುದ್ದಕ್ಕೂ ಮಜಲುಮಾಡಿ ಬೆಳಗಿನ ಜಾವ ಬೆಂಕಿ ತಗಲಿಸಿ ಆ ಶಿಲ್ಪಗಳನ್ನು ಸುಡುತ್ತಾರೆ. ಹೋಳಿ ಹಬ್ಬದಲ್ಲಿ ಕಾಮನ ಕುರಿತು ಅನೇಕ ಹಾಡುಗಳು ಪ್ರಚಲಿತದಲ್ಲಿದ್ದು ಕಾಮನ ಶಿಲ್ಪದ ಆಚರಣೆ ಮಾತ್ರ ಇನ್ನೂ ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿರುವ ಸಂಪ್ರದಾಯವಾಗಿದೆ.

## ೧೩. ರಾಸಿ ಹುಲುಸಾಗಿಸುವ ಬೂದಗಶಿಲ್ಪದ ಆಚರಣೆ

ದೃಷ್ಟಿದೋಷ ಪರಿಹಾರ ಆಶಯದ ಹಿನ್ನೆಲೆಯಲ್ಲಿ ರಚನೆಗೊಂಡಿರುವ ಬೂದುಗಶಿಲ್ಪದ ಆಚರಣೆ ಉತ್ತರ ಕರ್ನಾಟಕದಲ್ಲಿ ಕಂಡುಬರುತ್ತದೆ. ಪ್ರತಿಯೊಬ್ಬ ರೈತ ಕಣದಲ್ಲಿ ರಾಸಿ ಮಾಡುವಾಗ ತನ್ನ ರಾಶಿಯೂ ಹುಲುಸಾಗಲೆಂದು ಹಂತಿ ಹೊಡೆಯುವ ಕಡೆಯ ಎತ್ತಿನ ಸೆಗಣಿಯಿಂದ ಗುಪ್ಪೆಯಾಕೃತಿಯ ಶಿಲ್ಪವನ್ನು ಮಾಡಿ ಅದಕ್ಕೆ ಜೋಳದ ಕಾಳನ್ನು ಅಂಟಿಸಿ ಎತ್ತಿನ ಬಾಲದ ಜವಿಯನ್ನು ಕಿತ್ತಿ ಜುಟ್ಟದ ಹಾಗೆ ಸಿಕ್ಕಿಸುತ್ತಾನೆ. ಅದನ್ನು ಕಂಬಳಿ ಹೊದೆದುಕೊಂಡ ವ್ಯಕ್ತಿಯೊಬ್ಬ ಬಂದು ಪೂಜಿಸಿ ಕೈಯಲ್ಲಿ ಹಿಡಿದುಕೊಂಡು ಕಣದ ರಾಸಿಯನ್ನು ಐದು ಸುತ್ತುಹಾಕುತ್ತಾನೆ. ಸುತ್ತು ಹಾಕುವಾಗ 'ಹುಲಹುಲಗೋಸುರಂಬಳಿಗೋ' ಎನ್ನುತ್ತಾನೆ. ಈ ಸಮಯದಲ್ಲಿ ನೀರು ಸಿಂಪಡಿಸುತ್ತ ಬರಲಾಗುತ್ತದೆ. ನಂತರ ರಾಸಿಯ ಮಧ್ಯದಲ್ಲಿ 'ಬುದುಗ' ಶಿಲ್ಪವನ್ನು ಇಟ್ಟು ಮತ್ತೆ ಪೂಜಿಸಲಾಗುತ್ತದೆ. ಈ ಸಂದರ್ಭದಲ್ಲಿ ರಾಸಿಯ ಮೇಲೆ ಬೂದಿಯ ರಂಗೋಲಿಹಾಕುತ್ತಾರೆ. ಸೂರ್ಯ ಚಂದ್ರ, ನಕ್ಷತ್ರ ಮುಂತಾದ ಚಿತ್ರಗಳನ್ನು ಬಿಡಿಸುತ್ತಾರೆ. ರಾಸಿ ಮುಗಿದ ಮೇಲೆ ಮನೆಯ ಹಗೆಯಲ್ಲಿ ಈ ಧಾನ್ಯಗಳನ್ನು ಹಾಕುವಾಗ ಅದರೊಂದಿಗೆ ಮಧ್ಯದಲ್ಲಿ ಈ ಬೂದುಗಶಿಲ್ಪವನ್ನು ಹಾಕುತ್ತಾರೆ. ಬೂತ-ಬೂದ-ಬೂದುಗ

೯. ಎ.ವಿ. ಪಾಟೀಲ್: ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿಕ್ರಿಯೆ, ಪು.೩೨೮

ಆಗಿರುವುದಾಗಿ ಹೇಳುತ್ತಾರೆ. ಈ ಬೂದುಗಶಿಲ್ಪದ ರಚನಾ ವಿನ್ಯಾಸದ ಆಚರಣೆ ತುಂಬ ಸರಳವಾದುದಾಗಿದೆ.

## ಸಮಾರೋಪ

ಯಾವುದೇ ಪ್ರದೇಶದ ಸಂಸ್ಕೃತಿಯಾಗಲಿ ಅದು ಪರಂಪರೆಯ ಹೊಸ ನೆಲೆಗಳನ್ನು ಪಡೆದುಕೊಳ್ಳುತ್ತಲೇ ಸಂಸ್ಕೃತಿಯ ವಿವಿಧ ಅಭಿವ್ಯಕ್ತಿಗಳನ್ನು ಶ್ರೀಮಂತಗೊಳಿಸುತ್ತದೆ. ಚಿತ್ರ, ವಾಸ್ತುಶಿಲ್ಪ ಕಲೆಗಳಂತಹ ಮಾಧ್ಯಮಗಳು ಆಯಾ ಕಾಲದ ಜನಸಮುದಾಯದ ಪುರಾವೆಗಳಾಗಿ ಅಳಿದುಳಿದು ಬಂದಿವೆ. ಜನಪದರ ಆಚರಣೆಯಲ್ಲಿರುವ ಈ ವಾಸ್ತುಶಿಲ್ಪಗಳಿಗೆ ಅವುಗಳದೇ ಆದ ನಂಬಿಗೆ ರೂಪ, ಅರ್ಥವಂತಿಕೆ ಕಲ್ಪನೆಗಳ ಶಿಷ್ಟಾಚಾರಗಳಿದ್ದು ಒಂದು ರೀತಿಯಲ್ಲಿ ಪರಂಪರೆಯ ಕೊಂಡಿಗಳಾಗಿ, ಕೊಡುಗೆಗಳಾಗಿ ಅವು ಬೆಳೆದು ಬಂದಿವೆ.

ಸರಿದು ಹೋದ ಕಾಲದೊಂದಿಗೆ ಪ್ರಸ್ತುತವನ್ನು ವಿಮರ್ಶಿಸುವಾಗ ಅಥವಾ ಪರಾಮರ್ಶಿಸುವಾಗ ಪರಂಪರೆ ಅಥವಾ ಕಾಲಕ್ರಮಗಳನ್ನು ವಿಶ್ಲೇಷಿಸುತ್ತೇವೆ. ನಂತರದ ದಿನಗಳಿಗೆ ಇದೆ ಒಂದು ಸಂಸ್ಕೃತಿಯಾಗಿ ಕಾಣಿಸಿಕೊಳ್ಳುತ್ತದೆ. ಆಗ ಬೌದ್ಧಿಕ ಅರಿವು, ಶಕ್ತಿ, ಭೌತಿಕ ವಸ್ತು ಇತ್ಯಾದಿಗಳನ್ನು ಸಂಗತ ಮಾಡಿಕೊಳ್ಳುತ್ತೇವೆ. ಈ ಪ್ರಜ್ಞೆಯೇ ಹೊಸದನ್ನು ಯೋಚಿಸಿ, ಭಿನ್ನವಾದದ್ದನ್ನು ಕಂಡುಕೊಂಡು ಮೌಲ್ಯಯುಕ್ತ ಕ್ರಿಯೆಗಳನ್ನು ಹುಟ್ಟು ಹಾಕುತ್ತದೆ. ಮನಸ್ಸು, ಬುದ್ಧಿ, ತೀಕ್ಷ್ಣತೆ ಮತ್ತು ಕ್ರಿಯೆ ಬಾಹ್ಯವನ್ನೂ ಹೊರತುಪಡಿಸಿ, ವಿಕಸಿತವಾಗುವ ಪರಿಯನ್ನು ಕಾಣುತ್ತಿರುತ್ತದೆ. ಈ ರೀತಿಯ ಮನುಷ್ಯ ಸ್ವಭಾವಕ್ಕೆ ಸೌಂದರ್ಯದ ಬೆಲೆಯನ್ನು ತಂದುಕೊಡಬಲ್ಲ ಎಲ್ಲಾ ಶಕ್ತಿಗಳ ವಿಕಾಸ ಸಂಸ್ಕೃತಿಯೊಂದರ ಮೂಲಕ ಹುಟ್ಟಿಗೆ ಕಾರಣವಾಗುತ್ತದೆ.[೧೦] ಹಾಗೆಯೇ ಸಂಸ್ಕೃತಿಯೊಂದರ ಮೂಲಕ ಪರಂಪರೆಯ ಸೃಷ್ಟಿಯಾಗುತ್ತಿರುವುದು ಅದು ಮುಂದುವರಿದ ಸಂಸ್ಕೃತಿಗೆ ಮೂಲವಾಗಿ, ಪ್ರೇರಕವಾಗಿ ಹೊಸತನವನ್ನು ನೀಡಬಹುದಾಗಿದೆ. ಹೀಗಾಗಿ ಜನಪದರ ಈ ಕಲೆಗಳ ಹಿಂದಿರುವ ಒಟ್ಟು ಗ್ರಹಿಕೆಗಳು ಸಮಷ್ಠಿ ಸಮುದಾಯದ ನಿರ್ಮಾತೃವು ಆಗುತ್ತವೆ.

ಸಮಕಾಲೀನ ಸಂದರ್ಭದಲ್ಲಿ ವಾಸ್ತವ ಬದುಕಿನ ಜನಪದರ ವಾಸ್ತುಶಿಲ್ಪ ಕಲೆಗಳು ನಮ್ಮ ಸಂಸ್ಕೃತಿ ಹಾಗೂ ಪರಂಪರೆಯನ್ನು ಜೀವಂತವಾಗಿ ಉಳಿಸಿಕೊಂಡು ಬರುವಲ್ಲಿ ಮಹತ್ವದ ಪಾತ್ರ ವಹಿಸಿವೆ. ಒಂದೊಂದು ಜನಪದ ವಾಸ್ತುಶಿಲ್ಪ ಕಲೆಗಳನ್ನು ಗಮನಿಸಿದಾಗ ಕೆಲವು ಆಯಾ ಪ್ರದೇಶಕ್ಕೆ ಸೀಮಿತ ಹಾಗೂ ವಿಶಿಷ್ಟವೆನಿಸುವಂತೆ ಕಂಡುಬಂದರೂ ಮತ್ತೆ ಕೆಲವು ಕಲೆಗಳು ಸಾಮಾನ್ಯವಾಗಿ ಇನ್ನುಳಿದ ಕಡೆಗಳಲ್ಲಿ ಕಂಡುಬರುತ್ತವೆ. ಹೀಗೆ ಜನಪದ ವಾಸ್ತುಶಿಲ್ಪ ಕಲೆಗಳು ಆಯಾ ಪ್ರದೇಶದ ಜನಾಂಗಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಹಿನ್ನಲೆಯನ್ನು ಹಾಗೂ ಭೌಗೋಳಿಕ ಪರಿಸರವನ್ನು ಅವಲಂಬಿಸಿ ರೂಪತಳೆದಂತೆ ಕಂಡುಬರುತ್ತವೆ.

ಕರ್ನಾಟಕದುದ್ದಕ್ಕೂ ಇಂತಹ ಅನೇಕ ಜನಪದ ವಾಸ್ತುಶಿಲ್ಪಕಲೆಗಳ ಆಚರಣೆಗಳು ಕಂಡುಬರುತ್ತಿದ್ದು ಪ್ರಾದೇಶಿಕವಾಗಿ, ಜನಾಂಗಿಕವಾಗಿ ಇವುಗಳ ವಿಧಿ-ವಿಧಾನಗಳನ್ನು ಅಧ್ಯಯನ ಮಾಡುವ ಅವಶ್ಯಕತೆಯಿದೆ. ವ್ಯಾಪಕವಾದ ರೀತಿಯಲ್ಲಿ ಈ ಕ್ಷೇತ್ರದ ಸಂಶೋಧನಾ ಕಾರ್ಯ

---

೧೦. ಆರ್.ಎ. ಶಾಂತರಾಜ್ ಸಂ: ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ, ಪು.೧೭

ಚಟುವಟಿಕೆಗಳು ಕರ್ನಾಟಕದುದ್ದಕ್ಕೂ ನಡೆಯಬೇಕಾಗಿದೆ. ಆಧುನಿಕತೆಯ ಪ್ರಭಾವದಿಂದ ಇಂದು ಎಷ್ಟೋ ವಾಸ್ತುಶಿಲ್ಪಕಲೆಗಳ ಆಚರಣೆಗಳು ಮರೆಯಾಗಿ ಹೋಗಿವೆ. ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿರುವ ಇವುಗಳನ್ನು ಒಂದೆಡೆಗೆ ದಾಖಲಿಸುವ ಕಾರ್ಯ, ಅವುಗಳನ್ನು ಹಲವಾರು ನಿಟ್ಟಿನಿಂದ ಅಧ್ಯಯನ ಮಾಡುವ ಕಾರ್ಯ, ಉಪಯುಕ್ತವಾದವುಗಳನ್ನು ಉಳಿಸಿಕೊಳ್ಳುವ ಬೆಳೆಯಿಸುವ ಕೆಲಸಗಳು ಹಲವಾರು ಜನರ ಪ್ರಯತ್ನದಿಂದ ಆಗಬೇಕಾಗಿವೆ.

## ಪದಕೋಶ

ಗ್ವಾದಲಿ= ದನಗಳಿಗೆ ಆಹಾರವನ್ನಿಡುವ ಸ್ಥಳ

ಹರಿವಾಣ=ಮಣ್ಣಿನ ಪಾತ್ರೆ

ಪಡಸಾಲಿ=ಜಗಲಿ, ಹಜಾರ, ವಿಶಾಲ ಪ್ರಾಂಗಣ

ಹುಡೆ=ಊರಲ್ಲಿ ಹಿಂದೆ ರಕ್ಷಣೆಗಾಗಿ ಎತ್ತರವಾಗಿ ನಿರ್ಮಿಸಿದ ಕಟ್ಟಡ

ಗಿಂಡಿ=ತಂಬಿಗೆಯ ಆಕಾರದ ಚಿಕ್ಕ ಚರಿಗೆ

ಚರಗ=ಹೊಲದಲ್ಲಿ ನೈವೇದ್ಯ ಸಿಂಪಡಿಸುವುದು

ಚ್ಯಾಜ=ಸಂಭಾವನೆ

ಕಣಕ=ಗೋದಿ ಹಿಟ್ಟಿನ ಮುದ್ದೆ

ಕರಕಿ=ಗರಕಿ ಹುಲ್ಲು

ಕಲ್ಲಿಮೀಸೆ=ದಪ್ಪವಾದ ಮೀಸೆ

ಅಂಬಲಿ=ದ್ರವರೂಪದ ನುಚ್ಚಿನ ಹುಳಿ

ಸೆಡ್ಡೆ=ಕೂರಿಗೆಯ ಮೇಲೆ ಕಾಳನ್ನು ಹಾಕುವ ಸಾಧನ

ಹಗೆ=ಧಾನ್ಯಗಳನ್ನು ಸಂಗ್ರಹಿಸಿಡಲು ಭೂಮಿಯಲ್ಲಿ ತೆಗೆದ ಗುಂಡಿ

ಗೇಣು=ಒಂಬತ್ತು ಇಂಚು

ಜೂಲ=ಎತ್ತಿನ ಮೇಲೆ ಹಾಕುವ ಅಲಂಕಾರಿಕ ಹೊದಿಕೆ

ಕಣ=ರಾಶಿ ಮಾಡಲು ತಯಾರಿಸಿದ ನೆಲಗಟ್ಟು

ಅಡಕಲ ಗಡಿಗಿ=ಒಂದರ ಮೇಲೊಂದರಂತೆ ದೊಡ್ಡದು, ಸಣ್ಣದು ಗಡಿಗೆಗಳ ಏರಿಕೆ ಕ್ರಮದ ಜೋಡಣೆ

# ಗ್ರಂಥಋಣ

೧. ಡಾ.ಬಿ.ಎಸ್.ಗದ್ದಗೀಮಠ : ಕನ್ನಡ ಜಾನಪದ ಗೀತೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯.

೨. ಎ.ವ್ಹಿ.ಪಾಟೀಲ : ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿಕ್ರಿಯ (ಅಪ್ರಕಟಿತ ಹಸ್ತಪ್ರತಿ), ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿ.ಎಚ್‌ಡಿ. ಮಹಾ ಪ್ರಬಂಧ, ೧೯೮೧.

೩. ಡಾ.ಎಂ.ಚಿದಾನಂದಮೂರ್ತಿ : ಗ್ರಾಮೀಣ, ಬಾಪ್ಕೊ ಪ್ರಕಾಶನ, ಬೆಂಗಳೂರು, ೧೯೭೭.

೪. ಡಾ.ಎಸ್.ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೯೩.

೫. Ajith Kumar Mukarji : Folk Art of Bengal, Published by University of Calcutta, 1939.

೬. ಡಾ. ಜಿ.ಶಂ. ಪರಮಶಿವಯ್ಯ ಸಂ: ಡಾ. ಬಿ.ಎಸ್. ಗದ್ದಗಿಮಠರ ಬರಹಗಳು; ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೭. ಎನ್. ಮರಿಶಾಮಾಚಾರ, ಡಾ. ಅ.ಲ. ನರಸಿಂಹನ್ ಸಂ: ಶಿಲ್ಪಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೮. ಆರ್.ಎ. ಶಾಂತರಾಜ್ ಸಂ: ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ, ಸ್ಪಂದನ ಚಿತ್ರಕಲಾವಿದರ ಯುವ ಬಳಗ, ಬೆಂಗಳೂರು, ೧೯೯೫.

# ಮಂಟಪಮಾಲೆ

## ೩೩

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕ ವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಯವರು

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ